PARTICIPATORY GOVERNANCE RESEARCH

# ನಮ್ಮ ಆಸ್ಪತ್ರೆ ನಮ್ಮ ಜವಾಬ್ದಾರಿ!

## ಬೆಂಗಳೂರಿನ ಹೆರಿಗೆ ಆಸ್ಪತ್ರೆಗಳಲ್ಲಿನ ಸೇವೆಗಳನ್ನು ಉತ್ತಮಗೊಳಿಸುವಲ್ಲಿ ಸಮುದಾಯದ ಒಂದು ಪ್ರಯತ್ನ



ೀನಾ ನಾಯರ್ • ಪ್ರಭಾಕರ್ ಕೆ • ಪ್ರಾರ್ಥನ ರಾವ್ • ಪೂರ್ಣಿಮ ಜಿ.ಆರ್



PUBLIC AFFAIRS CENTRE
Committed to Good Governance

# ನಮ್ಮ ಆಸ್ಪತ್ರೆ ನಮ್ಮ ಜವಾಬ್ದಾರಿ!

## ಬೆಂಗಳೂರಿನ ಹೆರಿಗೆ ಆಸ್ಪತ್ರೆಗಳಲ್ಲಿನ ಸೇವೆಗಳನ್ನು ಉತ್ತಮಗೊಳಿಸುವಲ್ಲಿ ಸಮುದಾಯದ ಒಂದು ಪ್ರಯತ್ನ

• ಮೀನಾ ನಾಯರ್ • ಪ್ರಭಾಕರ್ ಕೆ • ಪ್ರಾರ್ಥನ ರಾವ್ • ಪೂರ್ಣಿಮ ಜಿ.ಆರ್


ಅಧ್ಯಯನ ಕೈಗೊಂಡವರು



ಧನ ಸಹಾಯ ಮಾಡಿದವರು



INTERNATIONAL BUDGET PARTNERSHIP
Open Budgets Transform Lives

ಅಧ್ಯಯನದಲ್ಲಿ ಪಾಲುದಾರರು





SPAD
Society for People's Action for Development



CENTRE FOR ADVOCACY AND RESEARCH



ಪಬ್ಲಿಕ್ ಅಫೇರ್ಸ್ ಸೆಂಟರ್ (ಪಿಎಸಿ) ಒಂದು ಸರ್ಕಾರೇತರ ಸಂಸ್ಥೆಯಾಗಿದ್ದು, 1994ರಲ್ಲಿ ಸ್ಥಾಪಿತವಾಗುವುದರ ಮೂಲಕ ಭಾರತದಲ್ಲಿ ಸರ್ಕಾರದ ಆಡಳಿತದ ಗುಣಮಟ್ಟವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸಲು ತನ್ನನ್ನು ತೊಡಗಿಸಿಕೊಂಡಿದೆ. ಪಿಎಸಿಯು ಪ್ರಾಥಮಿಕವಾಗಿ ನಾಗರಿಕರು ಹಾಗೂ ನಾಗರಿಕ ಸಮಾಜದ ಸಂಸ್ಥೆಗಳು ಸರ್ಕಾರದ ಕಾರ್ಯಗಳನ್ನು ಅಭಿವೃದ್ಧಿ ಪಡಿಸಲು ಕ್ರೀಯಾಶೀಲರಾಗಿ ನಿರ್ವಹಿಸುವ ಪಾತ್ರದ ಬಗ್ಗೆ ಗಮನ ಹರಿಸುತ್ತಿದೆ. ಇದಕ್ಕೆ ಪೂರಕವಾಗಿ ಪಿಎಸಿಯು ಸಂಶೋಧನೆಗಳನ್ನು ಮಾಡುವುದು, ಸಂಶೋಧನೆಗಳಿಂದ ಹೊರಬಂದ ಅಂಶಗಳನ್ನು ಹಂಚಿಕೊಳ್ಳುವುದು, ಹಾಗೂ ನಾಗರಿಕರಲ್ಲಿ ಸರ್ಕಾರದ ಸೇವೆಗಳ ಬಗ್ಗೆ ಅರಿವು ಮೂಡಿಸುವುದರ ಮೂಲಕ ಅವರು ರಾಜ್ಯ ಹಾಗೂ ರಾಜ್ಯೇತರ ಸಂಸ್ಥೆಗಳು ಸಕ್ರೀಯವಾಗಿ ಕಾರ್ಯನಿರ್ವಹಿಸುವಂತೆ ಮಾಡುವುದು ಮತ್ತು ನಾಗರಿಕರು ಈ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸುವಂತಹ ಕಾರ್ಯವನ್ನು ನಿರ್ವಹಿಸುತ್ತಿದೆ.

**ಪಬ್ಲಿಕ್ ಅಫೇರ್ಸ್ ಸೆಂಟರ್**

ನಂ. 15, ಕೆಐಎಡಿಬಿ ಕೈಗಾರಿಕಾ ಪ್ರದೇಶ,
ಬೊಮ್ಮಸಂದ್ರ- ಜಿಗಣಿ ಲಿಂಕ್ ರಸ್ತೆ,
ಹೆಣ್ಣಾಗರ ಅಂಚೆ, ಆನೇಕಲ್ ತಾಲೂಕು,
ಬೆಂಗಳೂರು 562106, ಭಾರತ.
ದೂರವಾಣಿ: +91 80 2783 9918/19/20
ಇ-ಮೇಲ್:mail@pacindia.org



ಮುಖಪುಟ ವಿನ್ಯಾಸ : ಪ್ರಾರ್ಥನ ರಾವ್, ಪಿ.ಎ.ಸಿ.
ಮುದ್ರಣ: ನ್ಯಾಷನಲ್ ಪ್ರಿಂಟಿಂಗ್ ಪ್ರೆಸ್



# ಅನುಕ್ರಮಣಿಕೆ


1. ಹಿನ್ನೆಲೆ .... 6

2. ಸಿಟಿಜನ್ ರಿಪೋರ್ಟ್ ಕಾರ್ಡ್ .... 9

3. ಆಯವ್ಯಯದ ವಿಶ್ಲೇಷಣೆ .... 23

4. ಕಮ್ಯುನಿಟಿ ಸ್ಕೋರ್ ಕಾರ್ಡ್ (ಸಿ ಎಸ್ ಸಿ) .... 28

5. ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿ .... 33

6. ಅನುಬಂಧಗಳು .... 41

ಶಬ್ಧ ಸಂಗ್ರಹ .... 51

# ಕೃತಜ್ಞತೆಗಳು

ಈ ಅಧ್ಯಯನವನ್ನು ಕೈಗೊಂಡು ಪ್ರಕಟಣೆಯನ್ನು ಮಂಡಿಸುವಲ್ಲಿ ಹಲವು ವ್ಯಕ್ತಿಗಳು ಹಾಗು ಸಂಸ್ಥೆಗಳು ನಮಗೆ ನೆರವಾಗಿವೆ. ನಾವು ಈ ಎಲ್ಲರಿಗೂ ಈ ಮೂಲಕ ಕೃತಜ್ಞತೆಗಳನ್ನು ಸಲ್ಲಿಸಲು ಇಚ್ಛಿಸುತ್ತೇವೆ. ಅದರಲ್ಲೂ ಮುಖ್ಯವಾಗಿ ನಮಗೆ ದಾಖಲೆಗಳನ್ನು ಪರೀಕ್ಷಿಸಲು ಹಾಗು ಆಸ್ಪತ್ರೆಯ ಸಿಬ್ಬಂದಿಗಳೊಂದಿಗೆ ಚರ್ಚೆ ನಡೆಸಲು ಅವಕಾಶಮಾಡಿಕೊಟ್ಟ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಾಜಿ ಮುಖ್ಯ ಆರೋಗ್ಯಾಧಿಕಾರಿಗಳು ಡಾ. ಗಾಯತ್ರಿ, ಹಾಗು ಪಾಲಿಕೆಯ ಆರೋಗ್ಯಾಧಿಕಾರಿಗಳಾದಂತಹ ಡಾ. ಮಂಜುಳ ಹಾಗು ಡಾ. ವತ್ಸಲ.

ಗವಿಪುರಂ ಗುಟ್ಟಹಳ್ಳಿ, ಕಾಕ್ಸ್‌ಟೌನ್ ಹಾಗು ನಂದಿನಿ ಲೇಔಟ್ ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣೆ ಮತ್ತು ಉಸ್ತುವಾರಿ ನಡೆಸುವ ವೈದ್ಯಕೀಯ ಅಧೀಕ್ಷಕರುಗಳಿಗೆ, ಇವರುಗಳು ನೀಡಿದ ಸಹಕಾರ ಹಾಗು ಮಾರ್ಗದರ್ಶನಕ್ಕೆ ಕೃತಜ್ಞತೆಗಳು.

ಗವಿಪುರಂ ಗುಟ್ಟಹಳ್ಳಿ, ಕಾಕ್ಸ್‌ಟೌನ್ ಹಾಗು ನಂದಿನಿ ಲೇಔಟ್ ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳು ಹಾಗು ಎಲ್ಲಾ ಸಿಬ್ಬಂದಿಗಳಿಗೂ ಅವರುಗಳು ತೋರಿದ ಸಹಕಾರಕ್ಕೆ ಕೃತಜ್ಞತೆಗಳು.

ನಮ್ಮೊಂದಿಗೆ ಪಾಲುದಾರರಾಗಿ ಕಾರ್ಯ ನಿರ್ವಹಿಸಿದ ಎನ್.ಜಿ.ಓಗಳಾದ **ಸ್ವ್ಯಾಡ್** (ಸೊಸೈಟಿ ಫಾರ್ ಪೀಪಲ್ಸ್ ಆಕ್ಷನ್ ಫಾರ್ ಡೆವಲ್ಪಮೆಂಟ್), **ಸಿಫಾರ್** (ಸೆಂಟರ್ ಫಾರ್ ಅಡ್ವೋಕೆಸಿ ಅಂಡ್ ರಿಸರ್ಚ್) ಮತ್ತು **ಅಪ್ಸ** (ಅಸೋಸಿಯೆಶನ್ ಫಾರ್ ಪ್ರಮೋಟಿಂಗ್ ಸೋಷಿಯಲ್ ಆಕ್ಷನ್) ತಂಡದವರಿಗೆ ಸಮುದಾಯದೊಂದಿಗೆ ಕಾರ್ಯ ನಡೆಸಲು ಅವರು ನೀಡಿದ ನಿರಂತರ ಸಹಾಯ ಹಾಗು ಸಹಕಾರಕ್ಕೆ.

ಅಧ್ಯಯನದ ಎಲ್ಲ ಚಟುವಟಿಕೆಗಳಲ್ಲಿಯೂ ಉತ್ಸಾಹದಿಂದ ಭಾಗವಹಿಸಿ ಹಾಗು ಮೇಲ್ವಿಚಾರಣಾ ಸಮಿತಿಯ ರಚನೆ ಹಾಗು ಅದರ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವ ಸಮುದಾಯದ ಎಲ್ಲಾ ಸದಸ್ಯರಿಗೆ, ನಮ್ಮೊಡನೆ ಹೆರಿಗೆ ಆಸ್ಪತ್ರೆಯ ಸುಧಾರಣೆ ಕಾರ್ಯಗಳಿಗೆ ಪ್ರೋತ್ಸಾಹ ನೀಡುತ್ತಿರುವ '**ಜನಾರೋಗ್ಯ ಆಂದೋಲನ ಕರ್ನಾಟಕ**' ಹಾಗು ಅದರ ಬೆಂಗಳೂರು ಶಾಖೆಗೆ.

ಈ ಅಧ್ಯಯನಕ್ಕೆ ಬೇಕಾಗುವ ಹಣದ ನೆರವನ್ನು ನೀಡಿದ ಇಂಟರ್‌ನ್ಯಾಷನಲ್ ಬಜೆಟ್ ಪಾರ್ಟ್‌ನರ್‌ಷಿಪ್ (ಐಬಿಪಿ) ಸಂಸ್ಥೆಗೆ ಹಾಗು ಅದರಲ್ಲಿಯೂ ಮುಖ್ಯವಾಗಿ ಶ್ರೀ ರವಿ ದುಗ್ಗಲ್‌ರವರಿಗೆ ಅವರ ಮಾರ್ಗದರ್ಶನಕ್ಕೆ.

ಡಾ. ಸೀತಾ ಶೇಖರ್ ಹಾಗು ಡಾ. ಗೋಪಕುಮಾರ್ ಥಂಪಿ, ಇವರುಗಳು ಪ್ರಸ್ತಾವನೆಯ ಹಂತದಲ್ಲಿ ನೀಡಿದ ಮಾರ್ಗದರ್ಶನಕ್ಕೆ

ಶ್ರೀ ಪ್ರೇಮ್‌ದಾಸ್, ಜನಾರೋಗ್ಯ ಆಂದೋಲನ ಕರ್ನಾಟಕ, ಈ ಪ್ರಕಟಣೆಯನ್ನು ಉತ್ತಮಗೊಳಸಲು ಇವರು ನೀಡಿದ ಸಲಹೆಗಳಗೆ.

ಪಿಎಸಿ ಸಂಸ್ಥೆಯ ಎಲ್ಲ ಸ್ನೇಹಿತರು ಹಾಗು ಸಹೋದ್ಯೋಗಿಗಳಗೆ ಇವರು ನೀಡಿದ ಪ್ರೋತ್ಸಾಹ ಹಾಗು ಸಹಕಾರಕ್ಕೆ.

ಈ ವರದಿಯಲ್ಲಿ ಪ್ರಕಟಿಸಿರುವ ಎಲ್ಲಾ ವಿಷಯಗಳಗೂ ಹಾಗು ಅದರಲ್ಲಿ ಕಂಡುಬರಬಹುದಾದ ಯಾವುದೇ ತಪ್ಪುಗಳಗೂ, ಲೇಖಕರಾದ ನಾವುಗಳೇ ಜವಾಬ್ದಾರರು.

ಡಾ. ಮೀನಾ ನಾಯರ್
ಡಾ. ಕೆ. ಪ್ರಭಾಕರ್
ಶ್ರೀಮತಿ. ಪ್ರಾರ್ಥನ ರಾವ್
ಶ್ರೀಮತಿ ಪೂರ್ಣಿಮ ಜಿ. ಆರ್

# 1. ಹಿನ್ನೆಲೆ

## 1. ಹಿನ್ನೆಲೆ

ಪಬ್ಲಿಕ್ ಅಫೇರ್ಸ್ ಸೆಂಟರ್ (ಪಿಎಸಿ) ಸಂಸ್ಥೆಯು ಒಂದು ಲಾಭಕಾರಿಯಲ್ಲದ ಸಂಸ್ಥೆಯಾಗಿದ್ದು, ಸರ್ಕಾರದ ಸೇವೆಗಳ ಗುಣಮಟ್ಟವನ್ನು ಉತ್ತಮ ಪಡಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಾ ಬಂದಿದೆ. ಬೆಂಗಳೂರಿನಲ್ಲಿ ಪಿಎಸಿಯ **ಸಿಟಿಜನ್ ರಿಪೋರ್ಟ್ ಕಾರ್ಡ್**[1]ಗಳು ತೋರಿಸಿರುವಂತೆ ಅಗತ್ಯ ಸೇವೆಗಳಾದ ಆರೋಗ್ಯ ಮತ್ತು ಶಿಕ್ಷಣದ ಮೇಲೆ ಸರ್ಕಾರವು ಅತ್ಯಧಿಕ ಹೂಡಿಕೆಯನ್ನು ಮಾಡಿದ್ದರೂ ಸಹ ಸಾರ್ವಜನಿಕರಲ್ಲಿ ಈ ಸೇವೆಗಳ ಪೂರೈಕೆಯ ಬಗ್ಗೆ ತೀವ್ರ ಅತೃಪಿಯನ್ನು ಕಾಣಬಹುದು. ಪರಿಣಾಮವಾಗಿ ಸೇವೆಗಳ ಲಭ್ಯತೆಯಲ್ಲಿ ಕೊರತೆ, ಕಳಪೆ ಗುಣಮಟ್ಟ, ವಿಶ್ವಾಸಾರ್ಹತೆ, ಮರೆಮಾಚಿದ ಖರ್ಚುಗಳು ಮತ್ತು ಬೇಜವಾಬ್ದಾರಿತನವು ಸಾರ್ವಜನಿಕ ವಲಯಗಳಲ್ಲಿ ಪಿಡುಗಾಗಿರುವುದು ಕಂಡುಬಂದಿದೆ. ಈ ನಿಟ್ಟಿನಲ್ಲಿ ಪಿಎಸಿಯು ಬಿಬಿಎಂಪಿಯ ವ್ಯಾಪ್ತಿಯಲ್ಲಿ ಬರುವ ಹೆರಿಗೆ ಆಸ್ಪತ್ರೆಯ ಸೇವೆಗಳ ಗುಣಮಟ್ಟದ ಬಗ್ಗೆ ಅಧ್ಯಯನವನ್ನು ಕೈಗೊಂಡಿದೆ.

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವೆಂದರೆ ಬಿಬಿಎಂಪಿಯ ಹೆರಿಗೆ ಆಸ್ಪತೆಗಳಲ್ಲಿ ದೊರೆಯುವ ಸೇವೆಗಳ ಗುಣಮಟ್ಟವನ್ನು ಅಳೆಯುವುದು. ಇದರ ಜೊತೆಗೆ ಸೇವೆಗಳ ಪೂರೈಕೆಗೆ ಸಂಬಂದಿಸಿದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು. ಆಯ್ದ ಹೆರಿಗೆ ಆಸ್ಪತ್ರೆಗಳ ಆಯವ್ಯಯ ಪಟ್ಟಿ, ಆದಾಯ ಮತ್ತು ಖರ್ಚುಗಳ ಅಧ್ಯಯನವನ್ನು ಕೈಗೆತ್ತಿಕೊಂಡು, ಈ ಮೂಲಕ ಹಣದ ಮತ್ತು ಅವುಗಳ ಬಳಕೆಯ ಅಂತರವನ್ನು ಗುರುತಿಸುವುದು ಮತ್ತು ಅವುಗಳನ್ನು ಹೆರಿಗೆ ಆಸ್ಪತ್ರೆಗಳಿಂದ ಪೂರೈಕೆಯಾದ ಸೇವೆಗಳ ಗುಣಮಟ್ಟದೊಂದಿಗೆ ಹೋಲಿಸುವುದು. ಇವುಗಳಿಂದ ಕಂಡುಬಂದ ಅಂತರಗಳನ್ನು ಕಡಿಮೆ ಮಾಡಲು ಅಗತ್ಯವಾದ ಶಿಫಾರಸ್ಸುಗಳನ್ನು ನೀಡುವುದು.

ಪ್ರಸ್ತುತ ಅಧ್ಯಯನವನ್ನು ನಡೆಸಲು ಪಿಎಸಿ ಸಂಸ್ಥೆಯು ಸಮುದಾಯದ ಬಳಕೆದಾರರೊಂದಿಗೆ ಕೆಲಸ ಮಾಡಿ ಅನುಭವವಿರುವ ಮೂರು ಎನ್.ಜಿ.ಓ ಗಳ ಜೊತೆ **ಸ್ಪ್ಯಾಡ್** (ಸೊಸೈಟಿ ಫಾರ್ ಪೀಪಲ್ಸ್ ಆಕ್ಷನ್ ಪಾರ್ ಡೆವಲ್ಪಮೆಂಟ್), **ಸಿಫಾರ್** (ಸೆಂಟರ್ ಫಾರ್ ಅಡ್ವೋಕೆಸಿ ಅಂಡ್ ರಿಸರ್ಚ್), **ಅಪ್ಸ** (ಅಸೋಸಿಯೆಶನ್ ಫಾರ್ ಪ್ರಮೋಟಿಂಗ್ ಸೋಷಿಯಲ್ ಆಕ್ಷನ್) ಪಾಲುದಾರಿಕೆಯನ್ನು ಮಾಡಿಕೊಂಡಿದೆ.

---

[1] www.citizenreportcard.com

## 2. ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶ

ಈ ಅಧ್ಯಯನದ ವ್ಯಾಪ್ತಿಯು ಬಿ.ಬಿ.ಎಂ.ಪಿ ಹೆರಿಗೆ ಆಸ್ಪತ್ರೆಗಳಲ್ಲಿ ದೊರೆಯುವ ಗರ್ಭಿಣಿ ಆರೈಕೆ, ಶಿಶುವಿನ ಆರೈಕೆ, ಹೆರಿಗೆ ಸೌಲಭ್ಯ, ಚುಚ್ಚುಮದ್ದು, ಆಸ್ಪತ್ರೆಯಲ್ಲಿ ಫಲಾನುಭವಿಗಳಿಗೆ ದೊರೆಯುವ ಯೋಜನೆಗಳ ಲಾಭಗಳು ಮತ್ತು ಕುಟುಂಬ ಯೋಜನೆಗೆ ಸೀಮಿತವಾಗಿದೆ. ಇವುಗಳಲ್ಲದೆ ಹೆರಿಗೆ ಆಸ್ಪತ್ರೆಗಳು ಸಾಮಾನ್ಯ ಕಾಯಿಲೆಗಳಿಗೆ ಚಿಕಿತ್ಸೆ, ಆರೋಗ್ಯ ಶಿಬಿರಗಳು, ಜಾಗೃತಿ ಕಾರ್ಯಕ್ರಮ, ಪಲ್ಸ ಪೋಲಿಯೋ ಕಾರ್ಯಕ್ರಮ ಹಾಗೂ ಇತರೆ ಚಿಕಿತ್ಸೆಯ ಸೌಲಭ್ಯಗಳನ್ನು ಸಹ ಒದಗಿಸುತ್ತಿದೆ. ಆದರೆ ಇವುಗಳು ನಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ಬರುವುದಿಲ್ಲ.

### 2.1 ಪ್ರಸ್ತುತ ಅಧ್ಯಯನದ ಉದ್ದೇಶಗಳು ಈ ಕೆಳಕಂಡಂತಿವೆ:

1. ಬಿ.ಬಿ.ಎಂ.ಪಿಯ ಹೆರಿಗೆ ಆಸ್ಪತ್ರೆಗಳು ನಗರದ ಬಡ ಮಹಿಳೆಯರಿಗೆ ಒದಗಿಸುತ್ತಿರುವ ಸೇವೆಗಳ ಗುಣಮಟ್ಟವನ್ನು ಅಳೆಯುವುದು.
2. ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳು ಅವರ ಪಾತ್ರವನ್ನು ನಿರ್ವಹಿಸುವಲ್ಲಿ ಎದುರಿಸುವ ಅಡೆತಡೆಗಳನ್ನು ಅರ್ಥಮಾಡಿಕೊಳ್ಳುವುದು.
3. ಸಮುದಾಯದವರು ಆಸ್ಪತ್ರೆಯ ಆಯವ್ಯಯದ ಮಾಹಿತಿಯ ಆಧಾರದ ಮೇಲೆ ಲಭ್ಯವಿರುವ ಸೇವೆಗಳ ಗುಣಮಟ್ಟವನ್ನು ಉತ್ತಮಗೊಳಿಸುವತ್ತ ಕಾರ್ಯನಿರ್ವಹಿಸುವುದು.
4. ಸಮುದಾಯದವರು ಆಸ್ಪತ್ರೆಯ ಸಿಬ್ಬಂದಿಗಳೊಂದಿಗೆ ಸೇರಿ ಆಸ್ಪತ್ರೆಯ ಕೆಲಸವನ್ನು ಪರಿಣಾಮಕಾರಿಯಾಗಿ ನಡೆಯುವಂತೆ ಮಾಡುವುದು.
5. ಈ ಅಧ್ಯಯನದಿಂದ ಕಂಡುಬರುವ ಮಾಹಿತಿಯ ಆಧಾರದ ಮೇಲೆ ಬಿ.ಬಿ.ಎಂ.ಪಿ ಆರೋಗ್ಯ ಇಲಾಖೆಗೆ ಹೆರಿಗೆ ಆಸ್ಪತ್ರೆಗಳು ನೀಡುತ್ತಿರುವ ಸೇವೆಗಳ ಅಂತರವನ್ನು ನಿವಾರಿಸಲು ಸೂಕ್ತ ಶಿಫಾರಸ್ಸು ಮಾಡುವುದು.

## 3. ಸಂಶೋಧನೆಯ ವಿನ್ಯಾಸ:

ಈ ಅಧ್ಯಯನದ ಗುರಿಯನ್ನು ಸಾಧಿಸಲು ಬೇರೆ ಬೇರೆ ಹಂತಗಳಲ್ಲಿ ವಿವಿಧ ವಿಧಾನಗಳನ್ನು ಬಳಸಿಕೊಳ್ಳಲಾಯಿತು. ಅವುಗಳೆಂದರೆ:

- ಬಿ.ಬಿ.ಎಂ.ಪಿ ಹೆರಿಗೆ ಆಸ್ಪತ್ರೆಗಳು ಒದಗಿಸುತ್ತಿರುವ ಗರ್ಭಿಣಿಯ ಆರೋಗ್ಯದ ಸೇವೆಗಳ ಸ್ಥಿತಿಗತಿಯನ್ನು ತಿಳಿಯಲು ಬೆಂಗಳೂರು ನಗರ ವ್ಯಾಪ್ತಿಯಲ್ಲಿ **ಸಿ.ಆರ್.ಸಿ** ಅಧ್ಯಯನವನ್ನು ಕೈಗೊಳ್ಳಲಾಯಿತು.

- ಬಿಬಿಎಂಪಿಯ ಆಯ್ದ 3 ಹೆರಿಗೆ ಆಸ್ಪತ್ರೆಗಳ **ಖರ್ಚುವೆಚ್ಚ ಹಾಗು ಆಯವ್ಯಯದ ವಿಶ್ಲೇಷಣೆ**ಯನ್ನು ಮಾಡಲಾಯಿತು.
- ಈ ಎರಡು ಚಟುವಟಿಕೆಗಳಿಂದ ಹೊರಬಂದ ಅಂಶಗಳನ್ನು ಆಯ್ದ 3 ಹೆರಿಗೆ ಆಸ್ಪತ್ರೆಯ ವ್ಯಾಪ್ತಿಗೆ ಒಳಪಡುವ ಪ್ರದೇಶಗಳಲ್ಲಿ ಒಂದೊಂದು **ಕಮ್ಯೂನಿಟಿ ಸ್ಕೋರ್ ಕಾರ್ಡ್**[2] **ಮತ್ತು ಸಿಬ್ಬಂದಿಗಳ ಸ್ಕೋರ್ ಕಾರ್ಡ್**[3] ಚಟುವಟಿಕೆಗಳನ್ನು ಮಾಡುವ ಮೂಲಕ ಸೇವೆಯನ್ನು ಉತ್ತಮಗೊಳಿಸಲು ಕ್ರಿಯಾ ಯೋಜನೆಯನ್ನು ತಯಾರಿಸಲಾಯಿತು.

ಈ ಚಟುವಟಿಕೆಗೆ ನಮ್ಮ ಪಾಲುದಾರ ಎನ್.ಜಿ.ಓ ಗಳಾದ ಸ್ವ್ಯಾಡ್, ಅಪ್ಸ ಮತ್ತು ಸಿಪಾರ್ ಸಂಸ್ಥೆಗಳ ಸಹಾಯವನ್ನು ಪಡೆಯಲಾಯಿತು. ಸುಮಾರು 6 ತಿಂಗಳ ಅವಧಿಯಲ್ಲಿ 3 ಹೆರಿಗೆ ಆಸ್ಪತ್ರೆಗಳಲ್ಲಿ ನಿರಂತರವಾಗಿ ನಡೆದ ಚಟುವಟಿಕೆಗಳಿಂದ ಸಮುದಾಯದ ಮೇಲ್ವಿಚಾರಣೆ ಹಾಗೂ ಕ್ರಿಯಾ ಯೋಜನೆಯನ್ನು ಜಾರಿಗೆ ತರುವುದರ ಮೂಲಕ **'ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿ'**ಯನ್ನು ಈ ಮೂರು ಹೆರಿಗೆ ಆಸ್ಪತ್ರೆಗಳಲ್ಲಿ ರಚಿಸಲಾಯಿತು.

ಓದುಗರ ಹಿತದೃಷ್ಟಿಯಿಂದ ಈ ವರದಿಯನ್ನು 5 ವಿಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ:

1. ಸಿಟಿಜನ್ ರಿಪೋರ್ಟ್ ಕಾರ್ಡ್
2. ಆಯ್ಯವ್ಯಯ ವಿಶ್ಲೇಷಣೆ
3. ಕಮ್ಯುನಿಟಿ ಸ್ಕೋರ್ ಕಾರ್ಡ್
4. ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ರಚನೆ ಮತ್ತು ಅದರ ಕಾರ್ಯಗಳು
5. ತುರ್ತಾಗಿ ಆಗಬೇಕಿರುವ ಸುಧಾರಣೆಗಳ ಸಾರಾಂಶ ಹಾಗು ಅದರತ್ತ ಮುಂದಿನ ಹೆಜ್ಜೆ.

---

[2]ಕಮ್ಯುನಿಟಿ ಸ್ಕೋರ್ ಕಾರ್ಡ್- ಆಸ್ಪತ್ರೆಯ ಬಳಕೆದಾರರು ತಾವು ಆಸ್ಪತ್ರೆಯಿಂದ ಪಡೆದ ಸೇವೆಗಳಿಗೆ ಅದರ ಗುಣಮಟ್ಟದ ಆಧಾರದ ಮೇಲೆ ಮೌಲ್ಯಮಾಪನ ಮಾಡುವುದು.

[3]ಸಿಬ್ಬಂದಿಗಳ ಸ್ಕೋರ್ ಕಾರ್ಡ್-ಆಸ್ಪತ್ರೆಯ ಸಿಬ್ಬಂದಿಗಳು ತಾವು ನೀಡುತ್ತಿರುವ ಸೇವೆಗಳ ಗುಣಮಟ್ಟದ ಸ್ವಮೌಲ್ಯಮಾಪನ ಮಾಡುವುದು.

# 2. ಸಿಟಿಜನ್ ರಿಪೋರ್ಟ್ ಕಾರ್ಡ್

ಸಿಟಿಜನ್ ರಿಪೋರ್ಟ್ ಕಾರ್ಡ್ ಎಂಬುದು ಒಂದು ಸಂಶೋಧನಾ ವಿಧಾನವಾಗಿದ್ದು, ಇದು ಸೇವೆಯ ಬಳಕೆದಾರರನ್ನೊಳಗೊಂಡ ಸಮೀಕ್ಷೆಯಾಗಿದೆ. ಈ ವಿಧಾನವನ್ನು ಉಪಯೋಗಿಸಿ ಬಿ.ಬಿ.ಎಂ.ಪಿಯು ಕಾರ್ಯನಿರ್ವಹಿಸುತ್ತಿರುವ ಶೇ. ಅರ್ಧದಷ್ಟು ಅಂದರೆ 24 ಹೆರಿಗೆ ಆಸ್ಪತ್ರೆಗಳಲ್ಲಿ 12 ಹೆರಿಗೆ ಆಸ್ಪತ್ರೆಗಳನ್ನು ಸಮೀಕ್ಷೆಗೆ ಒಳಪಡಿಸಲಾಯಿತು. ಕಳೆದ 2 ವರ್ಷಗಳಿಂದ ಈ 12 ಹೆರಿಗೆ ಆಸ್ಪತ್ರೆಗಳನ್ನು ಬಳಸುತ್ತಿರುವ ತಲಾ 10 ಬಳಕೆದಾರರನ್ನು ಪ್ರತಿಯೊಂದು ಹೆರಿಗೆ ಆಸ್ಪತ್ರೆಯ ವ್ಯಾಪ್ತಿ ಪ್ರದೇಶದಿಂದ ಆಯ್ಕೆ ಮಾಡಿ ಸಂದರ್ಶಿಸಲಾಯಿತು. ಇದರ ಜೊತೆಗೆ ಈ ಹೆರಿಗೆ ಆಸ್ಪತ್ರೆಗಳ ಸಿಬ್ಬಂದಿಗಳನ್ನು ಅಂದರೆ, ಸಹಾಯಕ ಶಸ್ತ್ರಚಿಕಿತ್ಸಕರು (ಹೆರಿಗೆ ಆಸ್ಪತ್ರೆಯನ್ನು ನೋಡಿಕೊಳ್ಳುವವರು), ಇತರೆ ವೈದ್ಯರು ಲಭ್ಯವಿದ್ದಲ್ಲಿ ಅವರಲ್ಲಿ ಒಬ್ಬರನ್ನು, ಒಬ್ಬರು ಎ.ಎನ್.ಎಮ್‌ಗಳನ್ನು ಸಂದರ್ಶಿಸಲಾಯಿತು. ಇದರ ಜೊತೆಗೆ ಈ ಹೆರಿಗೆ ಆಸ್ಪತ್ರೆಗಳ ಮೂಲಭೂತ ಸೌಕರ್ಯಗಳನ್ನು ಅವಲೋಕಿಸಲಾಯಿತು.

ಬಿಬಿಎಂಪಿಯ ಆರೋಗ್ಯ ವಿಭಾಗದ ಮುಖ್ಯ ಅಧಿಕಾರಿಗಳಾದ ಉಪ ಆಯುಕ್ತರು, ಮುಖ್ಯ ಆರೋಗ್ಯಾಧಿಕಾರಿ, ರೆಫರಲ್ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರು ಹಾಗೂ ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳ ಜೊತೆ ಹಲವು ಸುತ್ತಿನ ಮಾತುಕತೆಗಳನ್ನು ನಡೆಸುವುದರ ಮೂಲಕ ಹೆರಿಗೆ ಆಸ್ಪತ್ರೆಯ ಕಾರ್ಯನಿರ್ವಹಣಾ ಮಾರ್ಗದರ್ಶಿ, ಸೇವೆಯ ಕಡ್ಡಾಯ ನಡವಳಿಕೆಗಳು, ಆಯವ್ಯಯದ ತಯಾರಿಕೆಯ ವಿಧಾನ, ಹೆರಿಗೆ ಆಸ್ಪತ್ರೆಯ ವಿವಿಧ ಆದಾಯದ ಮೂಲಗಳು, ಹೆರಿಗೆ ಆಸ್ಪತ್ರೆಗೆ ಅನ್ವಯಿಸುವ ಹಲವು ಯೋಜನೆಗಳು ಮತ್ತು ಹೆರಿಗೆ ಆಸ್ಪತ್ರೆಯು ಮಾಡುವ ಖರ್ಚುವೆಚ್ಚಗಳ ಬಗ್ಗೆ ತಿಳಿದುಕೊಳ್ಳಲಾಯಿತು. ಇದರ ಆಧಾರದ ಮೇಲೆ ಈ ಸಮೀಕ್ಷೆಗೆ ಅವಶ್ಯವಿರುವ 3 ವಿಧದ ಪ್ರಶ್ನಾವಳಿಯನ್ನು ರಚಿಸಲಾಯಿತು.

**ಸಿಆರ್‌ಸಿಯ ಪ್ರಶ್ನಾವಳಿಗಳು:**

- ಹೆರಿಗೆ ಆಸ್ಪತ್ರೆಯ ಅವಲೋಕನ.
- ಹೆರಿಗೆ ಆಸ್ಪತ್ರೆಯನ್ನು ಬಳಸುವ ಬಳಕೆದಾರರ ಸಂದರ್ಶನ.
- ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳ ಸಂದರ್ಶನ.(ವೈದ್ಯರು ಮತ್ತು ಎ ಎನ್ ಎಮ್)

**ಸಿಆರ್‌ಸಿಯು ಈ ಕೆಳಗಿನ ಎಲ್ಲಾ ಅಂಶಗಳನ್ನು ಒಳಗೊಂಡಿದೆ:**

- ಆಸ್ಪತ್ರೆಯ ಲಭ್ಯತೆ.
- ಸೇವೆಗಳ ದೊರಕುವಿಕೆ ಹಾಗು ಅದನ್ನು ಬಳಸುವಿಕೆ.
- ಸೇವೆಯ ಗುಣಮಟ್ಟ ಮತ್ತು ವಿಶ್ವಾಸ.
- ಸಮಸ್ಯೆಗಳು ಮತ್ತು ಸಮಸ್ಯೆಯನ್ನು ಬಗೆಹರಿಸುವುದು.
- ವೆಚ್ಚಗಳು, ಭ್ರಷ್ಟಾಚಾರವನ್ನು ಒಳಗೊಂಡಂತೆ.
- ತೃಪ್ತಿ ಮತ್ತು ಸುಧಾರಣೆಗಾಗಿ ಸಲಹೆಗಳು.

ಇದರ ಜೊತೆಗೆ ಹೆರಿಗೆ ಆಸ್ಪತ್ರೆಯ ಸಂದರ್ಶಕ ಮಂಡಳಿಯ ಸದಸ್ಯರಿಂದ ಹೆರಿಗೆ ಆಸ್ಪತ್ರೆಯು ವಿವಿದ ರೀತಿಯಲ್ಲಿ ನಿರ್ವಹಿಸುತ್ತಿರುವ ಕೆಲಸಕಾರ್ಯಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಯಿತು. ಬಳಕೆದಾರರು ಮತ್ತು ಸೇವೆಯನ್ನು ಒದಗಿಸುವವರನ್ನು ಒಳಗೊಂಡಂತೆ ಒಟ್ಟು 168 ಸಂದರ್ಶನಗಳನ್ನು ಮಾಡಲಾಯಿತು.

## ಬಳಕೆದಾರರ ಅನಿಸಿಕೆಗಳು

### 1.0 ಸಮೀಕ್ಷೆಯನ್ನೊಳಗೊಂಡ ಬಳಕೆದಾರರ ವಿವರಗಳು:

ಪ್ರತಿಕ್ರಿಯೆಗಾರರೆಲ್ಲರೂ ಬೆಂಗಳೂರು ನಗರದ ಬಡಸಮುದಾಯಕ್ಕೆ ಸೇರಿದ ಮಹಿಳೆಯರಾಗಿದ್ದು, ಇವರು ಬಿ.ಬಿ.ಎಂ.ಪಿ ಕಾರ್ಯನಿರ್ವಹಿಸುತ್ತಿರುವ ಹೆರಿಗೆ ಆಸ್ಪತ್ರೆಗಳಲ್ಲಿ ಸೇವೆಯನ್ನು ಪಡೆದ ಮಹಿಳೆಯರಾಗಿದ್ದಾರೆ. ಬಹಳಷ್ಟು ಜನರು ಕಡಿಮೆ ವಿದ್ಯಾಭ್ಯಾಸ ಅಂದರೆ ಎಸ್.ಎಸ್.ಎಲ್.ಸಿ ಗಿಂತಲೂ ಕಡಿಮೆ ಓದಿದವರಾಗಿದ್ದಾರೆ. ಇವರುಗಳು ಕೃಷಿಯೇತರ ಕೂಲಿ ಮಾಡುವ ವರ್ಗಕ್ಕೆ ಮತ್ತು ಸಣ್ಣ ಖಾಸಗಿ ಉದ್ದಿಮೆದಾರರಲ್ಲಿ ಕೆಲಸ ಮಾಡುವವರಾಗಿದ್ದಾರೆ. ಪ್ರತಿಕ್ರಿಯೆ ನೀಡಿದ ಕುಟುಂಬದ ಸರಾಸರಿ ತಿಂಗಳ ಆದಾಯವು ರೂ.4500/-ರಷ್ಟಿದೆ. ಬಹಳಷ್ಟು ಬಳಕೆದಾರರು ಹೆರಿಗೆ ಆಸ್ಪತ್ರೆಯನ್ನು ಕಳೆದ 5 ವರ್ಷಗಳಿಂದ ಉಪಯೋಗಿಸುತ್ತಿದ್ದಾರೆ.

### 1.1 ಗರ್ಭಿಣಿ ಆರೋಗ್ಯದ ಸೇವೆಗೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು

ಬಹಳಷ್ಟು ಬಳಕೆದಾರರಿಗೆ ಹೆರಿಗೆ ಆಸ್ಪತ್ರೆಯು ಸಮೀಪದಲ್ಲಿದ್ದು, ಎಲ್ಲಾ ಗರ್ಭಿಣಿ ಮಹಿಳೆಯರು ಗರ್ಭಿಣಿ ಆರೈಕೆಯ ಸಮಯದಲ್ಲಿ ಹೆರಿಗೆ ಆಸ್ಪತ್ರೆಯ ಸೇವೆಗಳನ್ನು ಪಡೆದಿರುತ್ತಾರೆ. ಹೆರಿಗೆಯ ನಂತರ ಮಗುವಿನ ಆರೈಕೆ ಹಾಗೂ ಲಸಿಕೆಯ ಸೇವೆಯನ್ನು

ಸಹ ಪಡೆದಿದ್ದಾರೆ. ಆದರೆ ಕೇವಲ 56% ಪ್ರತಿಕ್ರಿಯೆಗಾರರು ಮಾತ್ರ ಹೆರಿಗೆ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡಿದ್ದಾರೆ.

### 1.2 ಗರ್ಭಿಣಿ ಆರೈಕೆಗೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು

ಗರ್ಭಿಣಿ ಮಹಿಳೆಯರು, ತಾವು ಆಸ್ಪತ್ರೆಗೆ ಭೇಟಿ ನೀಡಿದ ಸಮಯದಲ್ಲಿ ವೈದ್ಯರು ಲಭ್ಯವಿದ್ದು ಅವರನ್ನು ಪರೀಕ್ಷಿಸಿದ್ದು, ಅವರಿಗೆ ನಿರಂತರವಾಗಿ ತಪಾಸಣೆಗೆ ಬರಲು ತಿಳಿಸಿರುತ್ತಾರೆ. ಗರ್ಭಿಣಿ ಮಹಿಳೆಯರು ಸಹ ವೈದ್ಯರು ಹೇಳಿದ ಮಾರ್ಗದರ್ಶನವನ್ನು ಪಾಲಿಸಿರುತ್ತಾರೆ. ಇವರ ಪ್ರತಿ ತಪಾಸಣೆಯ ಸಮಯದಲ್ಲಿಯು ವೈದ್ಯಕೀಯ ಸಿಬ್ಬಂದಿಗಳು ಬಿ.ಪಿ ಪರೀಕ್ಷೆ, ತೂಕದ ಪರೀಕ್ಷೆ ಮತ್ತು ದೈಹಿಕ ಪರೀಕ್ಷೆಯನ್ನು ಮಾಡುವ ಮೂಲಕ ಮಗುವಿನ ಬೆಳವಣಿಗೆಯ ಬಗ್ಗೆ ಮೇಲ್ವಿಚಾರಣೆ ಮಾಡಿರುವುದಾಗಿ ತಿಳಿಸಿದ್ದಾರೆ. ಆಸ್ಪತ್ರೆಯಲ್ಲಿ ನೀಡಿದ ಐರನ್ ಮತ್ತು ಫಾಲಿಕ್ ಆಸಿಡ್ ಮಾತ್ರೆಗಳನ್ನು ತೆಗೆದುಕೊಂಡಿರುತ್ತಾರೆ. ಆದರೆ ಶೇ. 10ರಷ್ಟು ಜನರು ತಮಗೆ ಈ ಮಾತ್ರೆಗಳನ್ನು ನೀಡಿರುವುದಿಲ್ಲ ಎಂದು ತಿಳಿಸಿರುತ್ತಾರೆ. ವೈದ್ಯರು ಸ್ಕ್ಯಾನಿಂಗ್ ಮಾಡಿಸಲು ಸಲಹೆ ನೀಡಿದ್ದು, ಆದರೆ ಹೆರಿಗೆ ಆಸ್ಪತ್ರೆಯಲ್ಲಿ ಸ್ಕ್ಯಾನಿಂಗ್ ಸೌಲಭ್ಯವಿಲ್ಲದಿರುವುದರಿಂದ ಅರ್ಧದಷ್ಟು ಜನರು ಖಾಸಗಿ ಪ್ರಯೋಗಾಲಯದಲ್ಲಿ ಸ್ಕ್ಯಾನಿಂಗ್ ಮಾಡಿಸಿರುತ್ತಾರೆ, ಇನ್ನು ಉಳಿದ ಅರ್ಧದಷ್ಟು ಜನರು ರೆಫರಲ್ ಆಸ್ಪತ್ರೆ ಅಥವಾ ಸರ್ಕಾರಿ ಆಸ್ಪತ್ರೆಯಲ್ಲಿ ಸ್ಕ್ಯಾನಿಂಗ್ ಮಾಡಿಸಿರುವುದಾಗಿ ತಿಳಿಸಿರುತ್ತಾರೆ. ರಕ್ತಪರೀಕ್ಷೆಯನ್ನು ಅಂದರೆ ಹೆಚ್.ಬಿ ಸಂಖ್ಯೆ, ರಕ್ತದ ಸಕ್ಕರೆ ಪ್ರಮಾಣ, ಹೆಚ್.ಐ.ವಿ ಪರೀಕ್ಷೆ, ಮೂತ್ರ ಪರೀಕ್ಷೆಯನ್ನು ಹೆರಿಗೆ ಆಸ್ಪತ್ರೆಯಲ್ಲಿಯೇ ಮಾಡಿರುವುದಾಗಿ ತಿಳಿಸಿದ್ದಾರೆ. ಬಹಳಷ್ಟು ಸ್ತ್ರೀಯರು ಟೆಟನಸ್ ಚುಚ್ಚುಮದ್ದನ್ನು ಆಸ್ಪತ್ರೆಯಲ್ಲಿಯೇ ಪಡೆದಿದ್ದು ಅದಕ್ಕೆ ಪ್ರತಿಸಲವೂ ಬಳಸಿ ಬಿಸಾಡುವ ಸಿರೆಂಜುಗಳನ್ನೇ ಉಪಯೋಗಿಸಿರುವುದಾಗಿ ತಿಳಿಸಿದ್ದಾರೆ. ಹಾಗೆಯೇ ಮೂರನೇ ಒಂದರಷ್ಟು ಜನರು ಸಿರೆಂಜುಗಳಿಗೆ ಹಣ ನೀಡಿರುವುದಾಗಿ ತಿಳಿಸಿದ್ದಾರೆ.

### 1.3 ಹೆರಿಗೆಗೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು

ಪ್ರತಿಕ್ರಿಯಿಸಿದವರಲ್ಲಿ ಕೇವಲ ಅರ್ಧದಷ್ಟು (56%) ಜನರು ಮಾತ್ರ ಹೆರಿಗೆ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡಿರುವುದಾಗಿ ತಿಳಿಸಿದ್ದಾರೆ. ಆದರೆ ಉಳಿದವರು ಈ ಹೆರಿಗೆ ಆಸ್ಪತ್ರೆಗಳಲ್ಲಿ ಗರ್ಭಿಣಿ ಆರೈಕೆಯ, ಶಿಶುವಿನ ಆರೈಕೆಯ ಸೇವೆಯನ್ನು ಪಡೆದಿದ್ದು ಹೆರಿಗೆಗೆ ಮಾತ್ರ ಈ ಆಸ್ಪತ್ರೆಗಳಿಗೆ ಹೋಗಿರುವುದಿಲ್ಲ. ಬಹಳಷ್ಟು ಜನರು (67%) ಸರ್ಕಾರಿ ಆಸ್ಪತ್ರೆಯಲ್ಲಿ ಹೆರಿಗೆ ಸೌಲಭ್ಯವನ್ನು ಪಡೆದಿರುತ್ತಾರೆ. ಹೆರಿಗೆ ಆಸ್ಪತ್ರೆಯಲ್ಲಿ ಹೆರಿಗೆಯಾದವರಲ್ಲಿ ಗರಿಷ್ಠ (92%) ಜನರಿಗೆ ಸಾಮಾನ್ಯ ಹೆರಿಗೆಯಾಗಿರುತ್ತದೆ. ಸುಮಾರು ಶೇ.79 ರಷ್ಟು ಬಳಕೆದಾರರು ತಾವು ಹೆರಿಗೆಗೆ ಹೋದಾಗ ವೈದ್ಯರು ಲಭ್ಯವಿದ್ದರು ಎಂದು

ತಿಳಿಸಿದ್ದಾರೆ. ಎಲ್ಲಾ ಸಮಯದಲ್ಲಿಯೂ ಆಯಾ ಮತ್ತು ನರ್ಸ್‌ಗಳು ಯಾವಾಗಲೂ ಲಭ್ಯವಿರುವುದಾಗಿ ತಿಳಿಸಿರುತ್ತಾರೆ.

**1.4 ಯೋಜನೆಗಳ ಲಾಭಗಳನ್ನು ಪಡೆಯುವುದಕ್ಕೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು**

**ಜನನಿ ಸುರಕ್ಷಾ ಯೋಜನೆ(ಸುರಕ್ಷಿತ ತಾಯ್ತನ)**–120 ಪ್ರತಿಕ್ರಿಯೆಗಾರರಲ್ಲಿ ಕೇವಲ 26 ಜನರು ಮಾತ್ರ ಜನನಿ ಸುರಕ್ಷಾ ಯೋಜನೆಯ ಬಗ್ಗೆ ಮಾಹಿತಿಯಿರುವುದಾಗಿ ತಿಳಿಸಿದರು. ಅದರಲ್ಲಿ ಕೇವಲ 15 ಜನರು ಮಾತ್ರ ಈ ಯೋಜನೆಯ ಲಾಭದ 600/- ರೂಗಳ ಚೆಕ್ಕನ್ನು ಪಡೆದಿರುತ್ತಾರೆ. ಈ ಯೋಜನೆಯ ಲಾಭವನ್ನು ಪಡೆಯಲು ಬೇಕಾಗುವ ಮುಖ್ಯ ಅರ್ಹತೆ ಎಂದರೆ ಗರ್ಭಿಣಿ ಸ್ತ್ರೀಯು ಬಿ.ಪಿ.ಎಲ್ (ಬಡತನ ರೇಖೆಗಿಂತ ಕೆಳಗೆ) ಕುಟುಂಬಕ್ಕೆ ಸೇರಿದವರಾಗಿರಬೇಕು. ಈ ಅಧ್ಯಯನದಿಂದ ಕಂಡುಬಂದ ಪ್ರಮುಖ ಅಂಶವೆಂದರೆ ಹೆರಿಗೆ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡ 67 ಹೆಂಗಸರಲ್ಲಿ, 41 ಹೆಂಗಸರು ಬಿ.ಪಿ.ಎಲ್ ವರ್ಗಕ್ಕೆ ಸೇರಿರುತ್ತಾರೆ. ಇವರುಗಳಲ್ಲಿ ಶೇ.12 ರಷ್ಟು ಹೆಂಗಸರು ಈ ಯೋಜನೆಯ ಲಾಭವನ್ನು ಪಡೆದಿರುವುದಿಲ್ಲ.

**ಮಡಿಲು ಯೋಜನೆ**– ಸುಮಾರು ಶೇ. 73ರಷ್ಟು ಬಳಕೆದಾರರಿಗೆ ಮಡಿಲು ಯೋಜನೆಯ ಬಗ್ಗೆ ಅರಿವಿರುವುದಾಗಿ ಪ್ರತಿಕ್ರಿಯಿಸಿರುತ್ತಾರೆ (ಹೊಸದಾಗಿ ಜನಿಸಿದ ಮಗುವಿಗೆ ಈ ಕಿಟ್‌ನಲ್ಲಿ ಎಣ್ಣೆ, ಸೋಪು, ಬಟ್ಟೆ ಇತ್ಯಾದಿ ವಸ್ತುಗಳು ಇರುತ್ತದೆ) ಶೇ. 60ರಷ್ಟು ಜನರು ಈ ಯೋಜನೆಯ ಲಾಭವನ್ನು ಪಡೆದಿರುತ್ತಾರೆ.

**1.5 ಲಸಿಕೆ/ಚುಚ್ಚುಮದ್ದು ಸೇವೆಗೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು**

ಆಸ್ಪತ್ರೆಯಲ್ಲಿ ಹೆರಿಗೆಯಾದ ನಂತರ ಮಗುವಿಗೆ ವಿವಿದ ರೀತಿಯ ಲಸಿಕೆಯನ್ನು ಹಾಕುವುದರ ಬಗ್ಗೆ ಸಿಬ್ಬಂದಿಗಳು ಮಾಹಿತಿ ನೀಡಿರುವುದಾಗಿ ಮತ್ತು ಇವರಿಗೆ ಚುಚ್ಚುಮದ್ದಿನ ವಿವರಗಳ ವೇಳಾಪಟ್ಟಿಯನ್ನು ಒಳಗೊಂಡ ಕಾರ್ಡನ್ನು ನೀಡಿದ್ದಾರೆ ಎಂದು ಬಹಳಷ್ಟು ಬಳಕೆದಾರರು ತಿಳಿಸಿದ್ದಾರೆ.

**1.6 ಕುಟುಂಬ ಯೋಜನೆಗೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು**

ಸುಮಾರು ಶೇ. 54ರಷ್ಟು ಬಳಕೆದಾರರು ವರದಿ ಮಾಡಿರುವಂತೆ ಅವರಿಗೆ ಕುಟುಂಬ ಯೋಜನೆಯ ವಿಧಾನವನ್ನು ಅನುಸರಿಸಲು ಹೇಳಿರುತ್ತಾರೆ ಹಾಗೂ ಅವುಗಳನ್ನು ಇವರು ಅನುಸರಿಸಿರುವುದಾಗಿ ತಿಳಿಸಿದ್ದಾರೆ. ಸುಮಾರು ಶೇ.10ರಷ್ಟು ಬಳಕೆದಾರರು ಕಾಪರ್-ಟಿ(ವಂಕಿ)ಯನ್ನು, ಶೇ. 22ರಷ್ಟು ಜನರು ಶಸ್ತ್ರಚಿಕಿತ್ಸೆಯ ವಿಧಾನವನ್ನು ಅನುಸರಿಸಿರುವುದಾಗಿ ತಿಳಿಸಿದ್ದಾರೆ.

**1.7 ವೈದ್ಯಕೀಯ ಗರ್ಭಪಾತಕ್ಕೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು**

ಪ್ರತಿಕ್ರಿಯೆ ನೀಡಿದವರಲ್ಲಿ ಯಾವ ಬಳಕೆದಾರರು ಈ ಸೌಲಭ್ಯವನ್ನು ಉಪಯೋಗಿಸಿಲ್ಲ.

**1.8 ಔಷಧಿಗಳ ಲಭ್ಯತೆ ಮತ್ತು ವಿತರಣೆಗೆ ಸಂಬಂಧಿಸಿದಂತೆ ಕಂಡು ಬಂದ ಅಂಶಗಳು**

ಶೇ. 95ರಷ್ಟು ಬಳಕೆದಾರರು ಔಷಧಿಗಳನ್ನು ತೆಗೆದುಕೊಳ್ಳಲು ಬರೆದುಕೊಟ್ಟಿರುವುದಾಗಿ ತಿಳಿಸಿರುತ್ತಾರೆ. ಕೇವಲ ಶೇ. 12 ರಷ್ಟು ಜನರು ಮಾತ್ರ ತಮಗೆ ಬರೆದುಕೊಟ್ಟ ಎಲ್ಲಾ ಔಷಧಿಗಳನ್ನು ಆಸ್ಪತ್ರೆಯಲ್ಲಿಯೇ ಪಡೆದಿರುವುದಾಗಿ ಹೇಳಿರುತ್ತಾರೆ. ಶೇ.51 ರಷ್ಟು ಜನರು ತಮಗೆ ಬರೆದುಕೊಟ್ಟ ಔಷಧಿಗಳಲ್ಲಿ ಕೆಲವೊಂದು ಅಥವಾ ಸ್ವಲ್ಪ ಔಷಧಿಗಳನ್ನು ಆಸ್ಪತ್ರೆಯಲ್ಲಿ ಪಡೆದಿರುವುದಾಗಿ ಪ್ರತಿಕ್ರಿಯಿಸಿದ್ದಾರೆ. ಇವರುಗಳಲ್ಲಿ ಅಂದರೆ ಎಲ್ಲಾ ಔಷಧಿಗಳನ್ನು ಪಡೆದವರು ಮತ್ತು ಕೆಲವು ಔಷಧಿಗಳನ್ನು ಪಡೆದವರಲ್ಲಿ, ಶೇ.32 ರಷ್ಟು ಜನರು ಉಚಿತವಾಗಿ ಔಷಧಿಯನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ. ಇನ್ನೊಂದು ಆತಂಕದ ಅಂಶವೆಂದರೆ ಶೇ. 37ರಷ್ಟು ಬಳಕೆದಾರರು ಹೆರಿಗೆ ಆಸ್ಪತ್ರೆಯಿಂದ ಯಾವುದೇ ಔಷಧಿಯನ್ನು ಪಡೆದಿರುವುದಿಲ್ಲವೆಂದು ಹೇಳಿರುವುದು.

**1.9 ಬಳಕೆದಾರರೊಂದಿಗೆ ಸಿಬ್ಬಂದಿಗಳ ವರ್ತನೆಯ ಗುಣಮಟ್ಟದ ಬಗ್ಗೆ**

ಆಸ್ಪತ್ರೆಯ ಬಳಕೆದಾರರು ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳ ನಡವಳಿಕೆಯ ತೃಪ್ತಿಗೆ ಸಂಬಂಧಿಸಿದಂತೆ- ವೈದ್ಯರ ವರ್ತನೆ, ನರ್ಸ್‌ಗಳ ವರ್ತನೆ ಹಾಗೂ ಇತರೆ ಸಿಬ್ಬಂದಿಗಳ ವರ್ತನೆಯ ಬಗ್ಗೆ ಸಂತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಆದರೆ ಕೆಲವು ಬಳಕೆದಾರರು ಮಾತ್ರ ಹೆರಿಗೆ ಆಸ್ಪತ್ರೆಯನ್ನು ಭೇಟಿ ನೀಡಿದ ಸಂದರ್ಭದಲ್ಲಿ ಸಿಬ್ಬಂದಿಗಳು ಲಭ್ಯವಿಲ್ಲದಿರುವುದರ ಬಗ್ಗೆ, ಸಿಬ್ಬಂದಿಗಳು ಅಗತ್ಯವಿರುವ ಮಾಹಿತಿಯನ್ನು ನೀಡದಿರುವುದರ ಬಗ್ಗೆ ಮತ್ತು ಅವರ ಸಹಕಾರವಿಲ್ಲದಿರುವುದಕ್ಕೆ ಬೇಸರವನ್ನು ವ್ಯಕ್ತಪಡಿಸಿದ್ದಾರೆ.

**1.10 ಹೆಚ್ಚುವರಿ ಹಣ ನೀಡುವಿಕೆಗೆ ಸಂಬಂಧಿಸಿದಂತೆ**

ಬಿ.ಬಿ.ಎಂ.ಪಿ ಹೆರಿಗೆ ಆಸ್ಪತ್ರೆಯಲ್ಲಿ ಬಳಕೆದಾರರು ಹಲವು ಸೇವೆಗಳನ್ನು ಉಪಯೋಗಿಸಿದ್ದಕ್ಕಾಗಿ ಅಂದಾಜು ಎಷ್ಟು ಹಣವನ್ನು ಖರ್ಚುಮಾಡಿದ್ದಾರೆ ಎಂದು ತಿಳಿಯುವ ಪ್ರಯತ್ನವನ್ನು ಮಾಡಲಾಯಿತು. ಇದು ನಿಗದಿತ ಬಳಕೆದಾರರ ಶುಲ್ಕ ಹಾಗೂ ಸೇವೆಯನ್ನು ಪಡೆಯಲು ನೀಡಿದ ಹೆಚ್ಚಿಗೆ ಹಣವನ್ನು ಒಳಗೊಂಡಿದೆ. ಉದಾ: ಸರಾಸರಿ ರೂ.800/-ನ್ನು ಸಾಮಾನ್ಯ ಹೆರಿಗೆಗಾಗಿ ಖರ್ಚು ಮಾಡಿರುವುದಾಗಿ ಶೇ.67ರಷ್ಟು ಬಳಕೆದಾರರು ಹೇಳಿರುತ್ತಾರೆ. ಆದರೆ ನಿಗದಿತ ಶುಲ್ಕವು ರೂ.300 ರಿಂದ

ರೂ.350 ಆಗಿರುತ್ತದೆ. ಶೇ. 26ರಷ್ಟು ಬಳಕೆದಾರರು ಹೊಸದಾಗಿ ಜನಿಸಿದ ಮಗುವನ್ನು ನೋಡಲು ಸಹ ಹಣ ನೀಡಿರುವುದಾಗಿ ತಿಳಸಿದ್ದಾರೆ. ಇನ್ನೊಂದು ವಿಪರ್ಯಾಸವೆಂದರೆ ಹೆಣ್ಣು ಮಗುವಿಗೆ ರೂ. 300/- ಮತ್ತು ಗಂಡು ಮಗುವಿಗೆ ರೂ. 500/- ಎಂಬ ವ್ಯತ್ಯಾಸವಿರುವುದು.

**1.11 ಹೆರಿಗೆ ಆಸ್ಪತ್ರೆಯ ಸೇವೆಗಳ ತೃಪ್ತಿಯ ಮಟ್ಟ**

ಹೆರಿಗೆ ಆಸ್ಪತ್ರೆಯ ಎಲ್ಲಾ ಸೇವೆಗಳನ್ನು ಗಮನಕ್ಕೆ ತೆಗೆದುಕೊಂಡರೆ, ಶೇ.50ಕ್ಕಿಂತಲೂ ಕಡಿಮೆ ಬಳಕೆದಾರರು ಸಂಪೂರ್ಣ ತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ.

**1.12 ಅಸಮಾದಾನದ ಪ್ರಮುಖ ಕಾರಣಗಳು ಈ ಕೆಳಗಿನಂತಿವೆ**

- ಹೆರಿಗೆಯ ಸೌಲಭ್ಯಕ್ಕೆ ಸಂಬಂಧಿಸಿದಂತೆ ಆಸ್ಪತ್ರೆಯ ಕೆಲವು ಸಿಬ್ಬಂದಿಗಳು ಪ್ರತಿ ಸೇವೆಗೂ ಹಣವನ್ನು ಕೇಳುವುದು.
- ಕೆಲವು ಗರ್ಭಿಣಿ ಸ್ತ್ರೀಯರಿಗೆ ವೈದ್ಯರು ಅವರು ಮಾಡಿಸಿದ ಪರೀಕ್ಷೆಯ ಫಲಿತಾಂಶವನ್ನು ಹೇಳದೆ ಇರುವುದು.
- ಹೆರಿಗೆಯ ಸಮಯದಲ್ಲಿ ಸಿಬ್ಬಂದಿಗಳು ಲಭ್ಯವಿಲ್ಲದಿರುವುದು, ಮಗುವನ್ನು ತೋರಿಸುವುದಕ್ಕೂ ಹಣವನ್ನು ಕೇಳುವುದು.
- ಹೆರಿಗೆಯ ಸಂದರ್ಭದಲ್ಲಿ ನರ್ಸ್‌ಗಳು ಖಾಳಜಿ ತೆಗೆದುಕೊಳ್ಳದಿರುವುದು
- ಹೆರಿಗೆಯ ನಂತರ ಮಗುವಿಗೆ ಸ್ನಾನಮಾಡಿಸದಿರುವುದು ಮತ್ತು ಬಿಸಿನೀರನ್ನು ಕೊಡದಿರುವುದು.
- ಚುಚ್ಚುಮದ್ದನ್ನು ನೀಡುವ ಸಮಯದಲ್ಲಿ ನರ್ಸ್‌ಗಳು ಸರಿಯಾಗಿ ಖಾಳಜಿ ವಹಿಸದಿರುವುದು.
- ಕುಟುಂಬ ಯೋಜನೆಯಿಂದ ದೊರೆಯುವ ಲಾಭದ ಬಗ್ಗೆ ಸರಿಯಾದ ಮಾಹಿತಿಯನ್ನು ತಿಳಸದೆ ಇರುವುದು.
- ಯೋಜನೆಯ ಲಾಭಗಳನ್ನು ಪಡೆಯಲು ಒದಗಿಸಬೇಕಾದ ದಾಖಲೆಗಳ ಬಗ್ಗೆ ಸರಿಯಾದ ಮಾಹಿತಿ ನೀಡದಿರುವುದು.

### 1.13 ಬಳಕೆದಾರರು ಆಸ್ಪತ್ರೆಯ ಸುಧಾರಣೆಗಾಗಿ ನೀಡಿರುವ ಸಲಹೆಗಳು

- ಹೆರಿಗೆ ಆಸ್ಪತ್ರೆಗಳಲ್ಲಿ ಸ್ಕ್ಯಾನಿಂಗ್, ಸಿಝೇರಿಯನ್ ಶಸ್ತ್ರಚಿಕಿತ್ಸೆ ಮತ್ತು ತುರ್ತು ಚಿಕಿತ್ಸೆಯ ಸೇವೆಗಳನ್ನು ಒದಗಿಸಬೇಕು.
- ವೈದ್ಯರು ಬರೆದು ಕೊಡುವ ಎಲ್ಲಾ ಮಾತ್ರೆಗಳು ಹೆರಿಗೆ ಆಸ್ಪತ್ರೆಯಲ್ಲಿಯೇ ಸಿಗಬೇಕು.
- ಗರ್ಭಿಣಿ ತಪಾಸಣೆಯು ಎಲ್ಲಾ ದಿನಗಳಲ್ಲೂ ನಡೆಯಬೇಕು.
- ಹೆಚ್ಚು ಪರಿಣಾಮಕಾರಿಯಾಗಿ ಸೇವೆ ಸಲ್ಲಿಸಲು ಹೆಚ್ಚು ವೈದ್ಯರು ಮತ್ತು ನರ್ಸ್‌ಗಳನ್ನು ನೇಮಕ ಮಾಡಬೇಕು.
- ಕುಡಿಯುವ ನೀರು, ಶೌಚಾಲಯಗಳ ಸ್ವಚ್ಛತೆ, ಕುಳಿತು ಕೊಳ್ಳಲು ಕುರ್ಚಿಗಳ ವ್ಯವಸ್ಥೆ ವಾರ್ಡ್‌ಗಳಲ್ಲಿ ಹೆಚ್ಚು ಹಾಸಿಗೆ ವ್ಯವಸ್ಥೆ ಮುಂತಾದ ಮೂಲಸೌಕರ್ಯಗಳನ್ನು ಇನ್ನೂ ಉತ್ತಮಗೊಳಿಸಬೇಕು.
- ವೈದ್ಯರು ಪ್ರತಿದಿನ ಹೆರಿಗೆ ಆಸ್ಪತ್ರೆಗೆ ಭೇಟಿ ನೀಡಬೇಕು. ಆಸ್ಪತ್ರೆಯ ಸಿಬ್ಬಂದಿಗಳು ಬಳಕೆದಾರರೊಂದಿಗೆ ಸಹನೆಯಿಂದ ವರ್ತಿಸಬೇಕು.
- ಆಸ್ಪತ್ರೆಗಳಲ್ಲಿ ದೊರೆಯುವ ಯಾವ ಸೇವೆಗೂ ಹೆಚ್ಚಿಗೆ ಹಣವನ್ನು ಕೇಳಬಾರದು.

## ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳ ಅನಿಸಿಕೆ

### 2.1 ಆಸ್ಪತ್ರೆಯ ಸೇವೆಗಳ ಕುರಿತು

ಬಳಕೆದಾರರನ್ನು ಸಂದರ್ಶಿಸಿದ ಹೆರಿಗೆ ಆಸ್ಪತ್ರೆಗಳ ವ್ಯಾಪ್ತಿಯಲ್ಲಿಯೇ 12 ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳನ್ನು ಅವರು ಸಲ್ಲಿಸಿರುವ ವಿವಿಧ ಸೇವೆಗಳ ಬಗ್ಗೆ ಸಂದರ್ಶನಮಾಡಲಾಯಿತು. ಸಂದರ್ಶಿಸಿದ ಎಲ್ಲಾ ವೈದ್ಯರು ಮಹಿಳೆಯರಾಗಿದ್ದು ಅವರು ಆರೋಗ್ಯ ವಿಭಾಗದಲ್ಲಿ ಸುಮಾರು ಒಂದು ವರ್ಷದಿಂದ ಹದಿನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸುತ್ತಿರುವುದು ಕಂಡುಬಂದಿದೆ. ಹೆರಿಗೆ ಆಸ್ಪತ್ರೆಗಳಲ್ಲಿ ಗರ್ಭಿಣಿ ಆರೈಕೆ, ತಾಯಿ ಮತ್ತು ಮಗುವಿನ ಆರೈಕೆ, ಹೆರಿಗೆ, ಲಸಿಕೆ, ಕುಟುಂಬ ಯೋಜನೆಯ ಸಲಹೆ, ಸಣ್ಣ ಶಸ್ತ್ರಚಿಕಿತ್ಸೆ ಮತ್ತು ಸಾಮಾನ್ಯ ಖಾಯಿಲೆಗೆ ಚಿಕಿತ್ಸೆಯನ್ನು ನೀಡಲಾಗುತ್ತಿದೆ ಎಂದು ವೈದ್ಯರು ತಿಳಿಸಿದ್ದಾರೆ. ಪ್ರತಿ ಗರ್ಭಿಣಿ ತಪಾಸಣೆಯ ಸಂದರ್ಭದಲ್ಲಿ ಬಿ.ಪಿ ಪರೀಕ್ಷೆ ತೂಕದ ಪರೀಕ್ಷೆ, ಗರ್ಭಿಣಿಯ ದೈಹಿಕ ಪರೀಕ್ಷೆಯನ್ನು ಮಾಡುವುದಾಗಿ ತಿಳಿಸಿದರು.

ಸ್ಕ್ಯಾನಿಂಗ್ ಹಾಗೂ ಇತರೆ ಪ್ರಯೋಗಾಲಯದ ಪರೀಕ್ಷೆಗೆ ಸಂಬಂದಿಸಿದಂತೆ ಕೇಳಿದಾಗ, ಕೆಲವು ರಕ್ತಪರೀಕ್ಷೆಯನ್ನು ಮತ್ತು ಮೂತ್ರ ಪರೀಕ್ಷೆಯನ್ನು ಹೆರಿಗೆ ಆಸ್ಪತ್ರೆಯಲ್ಲಿಯೇ ಮಾಡಲಾಗುತ್ತಿದ್ದು, ಮೂಲಭೂತ ಸೌಕರ್ಯದ ಕೊರತೆಯಿಂದಾಗಿ ಹೆರಿಗೆ ಆಸ್ಪತ್ರೆಯಲ್ಲಿ ಸ್ಕ್ಯಾನಿಂಗ್ ಮಾಡುವುದಿಲ್ಲವೆಂದು ತಿಳಿಸಿದ್ದಾರೆ. ಆದರೆ ಇವರನ್ನು ರೆಫರಲ್ ಅಥವಾ ಸರ್ಕಾರಿ ಆಸ್ಪತ್ರೆಗೆ ಸ್ಕ್ಯಾನಿಂಗ್‌ಗೆ ಕಳುಹಿಸುವುದಾಗಿ ತಿಳಿಸಿದ್ದಾರೆ. ಗರ್ಭಾವಸ್ಥೆಯಲ್ಲಿ ಎಲ್ಲಾ ಗರ್ಭಿಣಿ ಮಹಿಳೆಯರಿಗೆ ಕಬ್ಬಿಣ ಮತ್ತು ಪಾಲಿಕ್ ಆಸಿಡ್ ಮಾತ್ರೆಗಳನ್ನು, ಧನುರ್ವಾಯು ಚುಚ್ಚುಮದ್ದನ್ನು ಕೊಟ್ಟಿರುವುದಾಗಿ ತಿಳಿಸಿದ್ದಾರೆ.

ಒಂದು ಹೆರಿಗೆ ಆಸ್ಪತ್ರೆಯನ್ನು ಹೊರತು ಪಡಿಸಿ, ಉಳಿದೆಲ್ಲಾ ಹೆರಿಗೆ ಆಸ್ಪತ್ರೆಗಳಲ್ಲಿಯೂ ದಿನದ 24 ಗಂಟೆಗಳ ಕಾಲ ಹೆರಿಗೆ ಸೌಲಭ್ಯವನ್ನು ನೀಡಲಾಗುವುದು ಎಂದು ತಿಳಿಸಿದ್ದಾರೆ. ಮೂಲಭೂತ ಸೌಕರ್ಯದ ಕೊರತೆಯ ಸಲುವಾಗಿ ಈ ಹೆರಿಗೆ ಆಸ್ಪತ್ರೆಯಲ್ಲಿ ಹೆರಿಗೆ ಮತ್ತು ವೈದ್ಯಕೀಯ ಗರ್ಭಪಾತವನ್ನು ಮಾಡುತ್ತಿಲ್ಲವೆಂದು ತಿಳಿಸಿದರು. ಕೆಲವೊಂದು ಕ್ಲಿಷ್ಟಕರ ಹೆರಿಗೆಯನ್ನು ಮಾಡಲು ಹೆರಿಗೆ ಆಸ್ಪತ್ರೆಗಳಲ್ಲಿ ಮೂಲ ಸೌಕರ್ಯಗಳ ಕೊರತೆ ಹಾಗೂ ನುರಿತ ಶಸ್ತ್ರಚಿಕಿತ್ಸಕರ (ಮಕ್ಕಳ ಮತ್ತು ಪ್ರಸೂತಿ) ಕೊರತೆಯಿರುವುದರಿಂದ ಇಂತಹ ಪ್ರಕರಣಗಳನ್ನು ಸರ್ಕಾರಿ ಆಸ್ಪತ್ರೆಗೆ ರೆಫರ್ ಮಾಡಲಾಗುವುದು ಎಂದು ತಿಳಿಸಿದ್ದಾರೆ. ಹುಟ್ಟಿದ ಮಗುವಿಗೆ ಲಸಿಕೆಯನ್ನು ಹಾಕಲಾಗುತ್ತದೆ ಮತ್ತು ಪ್ರತಿ ಗುರುವಾರವನ್ನು ಲಸಿಕೆಗಾಗಿ ನಿಗಧಿ ಪಡಿಸಲಾಗಿದೆ. ಹೆರಿಗೆ ಆಸ್ಪತ್ರೆಗಳಲ್ಲಿ **ಜನನಿ ಸುರುಕ್ಷಾ ಯೋಜನೆ** ಮತ್ತು **ಮಡಿಲು ಯೋಜನೆ**ಯನ್ನು ನೀಡಲಾಗುತ್ತಿದೆ ಎಂದು ತಿಳಿಸಿದ್ದಾರೆ. ಪ್ರತಿಕ್ರಿಯಿಸಿದ ಎಲ್ಲಾ ಹೆರಿಗೆ ಆಸ್ಪತ್ರೆಯ ವೈದ್ಯರು ಸಹ ಎಲ್ಲಾ ಅರ್ಹರಿಗೆ ಈ ಯೋಜನೆಯ ಸೌಲಭ್ಯವನ್ನು ಒದಗಿಸುತ್ತಿರುವುದಾಗಿ ತಿಳಿಸಿದ್ದಾರೆ.

### 2.2 ಹೆರಿಗೆ ಆಸ್ಪತ್ರೆಯಲ್ಲಿನ ಮಾನವ ಸಂಪನ್ಮೂಲಗಳ ಸ್ಥಿತಿ (ಸಿಬ್ಬಂದಿ)

ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳು ಪ್ರತಿಕ್ರಿಯಿಸಿರುವ ಪ್ರಕಾರ, ಬಿಬಿಎಂಪಿಯಿಂದ ಮಂಜೂರಾದ ಬಹಳಷ್ಟು ಸ್ಥಾನಗಳು ಖಾಲಿಯಿರುವುದು. ಇನ್ನೊಂದು ಕುತೂಹಲಕಾರಿ ಅಂಶವೆಂದರೆ, ಸ್ಟಾಫ್ ನರ್ಸ್‌ಗಳನ್ನು ಮತ್ತು ಗುಮಾಸ್ತರನ್ನು ಕೆಲವೊಂದು ಹೆರಿಗೆ ಆಸ್ಪತ್ರೆಗಳಿಗೆ ಮಾತ್ರ ಮಂಜೂರು ಮಾಡಲಾಗಿದೆ. ಹಾಗೂ ಕೆಲವು ಹೆರಿಗೆ ಆಸ್ಪತ್ರೆಗಳಲ್ಲಿ ಮಂಜೂರಾದ ಹುದ್ದೆಗಳನ್ನು ಭರ್ತಿಮಾಡಿರುವುದೇ ಇಲ್ಲ. ಕೆಲವು ಜನರು ನಿಯೋಗದ ಮೇರೆಗೆ ಈ ಹೆರಿಗೆ ಆಸ್ಪತ್ರೆಗಳಲ್ಲಿ ಪೂರ್ಣಾವಧಿಗೆ ಕಾರ್ಯನಿರ್ವಹಿಸುತಿದ್ದಾರೆ, ಕೆಲವು ಅಗತ್ಯ ಸೇವೆಗಳ ಸ್ಥಾನಗಳಾದ ಸಹಾಯಕ ಶಸ್ತ್ರಚಿಕಿತ್ಸಕರ ಹುದ್ದೆಯನ್ನು ಕೆಲವು ಸಂದರ್ಭದಲ್ಲಿ ಹೆರಿಗೆ ಆಸ್ಪತ್ರೆಗಳಲ್ಲಿ ಹಂಚಿಕೊಳ್ಳಲಾಗುತ್ತಿದೆ. ಆಡಳಿತ ಸೇವೆಗಳನ್ನು ಮಾಡುವ ಗುಮಾಸ್ತರನ್ನು ಸಹ ಹೆರಿಗೆ ಆಸ್ಪತ್ರೆಗಳಲ್ಲಿ ಹಂಚಿಕೊಳ್ಳಲಾಗುತ್ತಿದೆ. ಹೆರಿಗೆ ಆಸ್ಪತ್ರೆಯ ವೈದ್ಯರು ನೀಡಿರುವ ಆಸಕ್ತಿಕರ ಸಲಹೆ ಎಂದರೆ, – ಆಯಾಗಳ (ಸ್ವಚ್ಛ

ಮಾಡುವವರು) ಹುದ್ದೆಯನ್ನು ತೆಗೆದು ಅವರ ಪಾತ್ರ ಮತ್ತು ಜವಾಬ್ದಾರಿಯನ್ನು ಪೂರ್ತಿಮಾಡುತ್ತಿರುವ ಪೌರಕಾರ್ಮಿಕರನ್ನು ನೇಮಿಸಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ.

## 2.3 ಆಯವ್ಯಯದ ಸಿದ್ಧತೆ, ಹಂಚಿಕೆ ಮತ್ತು ಅದರ ಉಪಯೋಗ

ಹೆರಿಗೆ ಆಸ್ಪತ್ರೆಗಳಿಗೆ ನೇರವಾಗಿ ಹಣದ ರೂಪದಲ್ಲಿ ಸಹಾಯಧನವು ಬರುವುದಿಲ್ಲವೆಂದು ವೈದ್ಯಾಧಿಕಾರಿಗಳು ತಿಳಿಸಿದ್ದಾರೆ. ಆದರೆ ಹೆರಿಗೆ ಆಸ್ಪತ್ರೆಯ ಆಯವ್ಯಯವು ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳು ಸಲ್ಲಿಸುವ ಬಿಡ್ಸ್ ಆಧಾರದ ಮೇಲೆ (Budget Information Data -BID) ತಯಾರಿಸಲಾಗುವುದು ಎಂದು ತಿಳಿಸಿದ್ದಾರೆ.

## 2.4 ಔಷಧಿಗಳು ಮತ್ತು ಸಲಕರಣೆಗಳು

ಬಿಬಿಎಂಪಿಯ ಕೇಂದ್ರ ಔಷಧಿ ಉಗ್ರಾಣದಿಂದ ತಾಯಿ ಮತ್ತು ಮಗುವಿಗೆ ಬೇಕಾಗುವ ಎಲ್ಲಾ ಲಸಿಕೆಗಳನ್ನು ಪಡೆದುಕೊಳ್ಳುವುದಾಗಿ ತಿಳಿಸಿದ್ದಾರೆ. ಒಂದು ಪಕ್ಷ ಖಾಸಗಿ ಔಷಧಾಲಯದಿಂದ ಔಷಧಿಗಳನ್ನು ಕೊಂಡುಕೊಳ್ಳಬೇಕಾದರೆ ಅದಕ್ಕೆ ಸಂದರ್ಶಕ ಮಂಡಳಿಯ ಸದಸ್ಯರ ಅನುಮೋದನೆಯನ್ನು ಮೊದಲು ಪಡೆಯಬೇಕು ಎಂದು ತಿಳಿಸಿದರು. ಸಾಮಾನ್ಯವಾಗಿ ತಾವು ನೀಡಿದ ಬೇಡಿಕೆಗೆ ಅನುಗುಣವಾಗಿ ಕೇಂದ್ರ ಔಷಧಿ ಉಗ್ರಾಣದಿಂದ ಒಂದು ಅಥವಾ ಎರಡು ದಿನದಲ್ಲಿ ಔಷಧಿಗಳನ್ನು ಪಡೆಯುವುದಾಗಿ ತಿಳಿಸಿದ್ದಾರೆ. ಕೆಲವೊಂದು ಸಮಯದಲ್ಲಿ ಔಷಧಿಗಳ ಕೊರತೆ ಕಂಡುಬಂದಲ್ಲಿ ಅಥವಾ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಬಳಕೆದಾರರ ಶುಲ್ಕದ ಹಣದಿಂದ ಔಷಧಿಗಳನ್ನು ಖರೀದಿಸುವುದಾಗಿ ತಿಳಿಸಿದ್ದಾರೆ. ಎಲ್ಲಾ ವೈದ್ಯಾಧಿಕಾರಿಗಳು ತಮ್ಮ ರೆಫರಲ್ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರಿಗೆ ಔಷಧಿಯ ಬಳಕೆಯ ವಿವರವನ್ನು ಪ್ರತಿ ತಿಂಗಳು ನೀಡುತ್ತಿರುವುದಾಗಿ ತಿಳಿದ್ದಾರೆ.

**"ನಾವು ಕೇಂದ್ರ ಔಷಧಾಲಯಕ್ಕೆ ಇಂಡೆಂಟ್ ಮೂಲಕ ಔಷಧಿಗಳ ಪೂರೈಕೆಗಾಗಿ ಬೇಡಿಕೆ ಸಲ್ಲಿಸುತ್ತೇವೆ, ಅಲ್ಲಿ ಅದರ ದಾಸ್ತನು ಇಲ್ಲದಿದ್ದರೆ, ಜನರಲ್ ಡ್ರಗ್ ಸ್ಟೋರ್ ಅಥವಾ ಜನತಾ ಬಜಾರ್‌ನಲ್ಲಿ ಕೇಳುತ್ತೇವೆ, ಇಲ್ಲಿಯು ಸಹ ದಾಸ್ತನು ಇಲ್ಲದಿದ್ದರೆ, ಖಾಸಗಿ ಔಷಧಿ ಅಂಗಡಿಯಿಂದ ಧಾರಣೆ ಪಟ್ಟಿಯನ್ನು ತರಿಸಿ, ಕಡಿಮೆ ಬಿಡ್ಡುದಾರರಿಂದ ಔಷಧಿಯನ್ನು ಖರೀದಿಸುತ್ತೇವೆ-ಎಂದು ಸಂದರ್ಶನದ ಸಮಯದಲ್ಲಿ ಒಬ್ಬರು ವೈದ್ಯಾಧಿಕಾರಿ ತಿಳಿಸಿದ್ದಾರೆ.**

## 2.5 ಒಳರೋಗಿಗಳ ಆಹಾರ

ಎಲ್ಲಾ ಒಳರೋಗಿಗಳಗೂ ಉಚಿತವಾಗಿ ಆಹಾರವನ್ನು ನೀಡುತ್ತಿರುವುದಾಗಿ ತಿಳಸಿದ್ದಾರೆ. ಹೆರಿಗೆ ಆಸ್ಪತ್ರೆಗಳಲ್ಲಿ ದಿನಕ್ಕೆ 2 ಸಾರಿ ಹಾಲನ್ನು, ಒಂದು ಸಾರಿ ಬ್ರೆಡ್‌ನ್ನು ಮತ್ತು ಒಂದು ಸಾರಿ ಒಂದು ಬಾಳೆಹಣ್ಣು ಅಥವಾ ಒಂದು ಮೊಟ್ಟೆಯನ್ನು ನೀಡುತ್ತಿರುವುದಾಗಿ ತಿಳಸಿದ್ದಾರೆ. ಬಹುತೇಕ ಹೆರಿಗೆ ಆಸ್ಪತ್ರೆಗಳಲ್ಲಿ ಒಂದು ನಿರ್ದಿಷ್ಟ ಪ್ರಮಾಣದ ಹಾಲನ್ನು ಪ್ರತಿದಿನ ತೆಗೆದುಕೊಳ್ಳಲಾಗುತ್ತದೆ. ಒಂದು ಪಕ್ಷ ಹಾಲಿನ ಕೊರತೆ ಕಂಡುಬಂದರೆ, ಪ್ರತಿ ರೋಗಿಗೆ ದಿನಕ್ಕೆ ಎರಡು ಸಾರಿ ನಿಗದಿತ 250 ಎಂ.ಎಲ್ ಹಾಲು ಕೊಡುವ ಬದಲು, ಇರುವ ಹಾಲನ್ನು ಎಲ್ಲಾ ಒಳರೋಗಿಗಳಗೆ ಸಮಾನವಾಗಿ ಹಂಚಲಾಗುತ್ತದೆ ಎಂದು ಆಸ್ಪತ್ರೆಯ ವೈದ್ಯರು ತಿಳಸಿದ್ದಾರೆ.

## 2.6 ಬಳಕೆದಾರರ ಶುಲ್ಕ

ಬಿ.ಬಿ.ಎಂ.ಪಿ ಹೆರಿಗೆ ಆಸ್ಪತ್ರೆಗಳು ನೀಡುತ್ತಿರುವ ಸೌಲಭ್ಯಗಳಾದ ಹೆರಿಗೆ, ಪ್ರಯೋಗಾಲಯ, ವೈದ್ಯಕೀಯ ಗರ್ಭಪಾತ, ಹಾಗೂ ಇತರೆ ಸೇವೆಗಳಗೆ ನಿಗದಿತ ಬಳಕೆದಾರರ ಶುಲ್ಕವನ್ನು ವಸೂಲಿ ಮಾಡುತ್ತಿರುವುದು ಕಂಡುಬಂದಿದೆ. ಹೆರಿಗೆ ಆಸ್ಪತ್ರೆಯಲ್ಲಿ ವಸೂಲಿ ಮಾಡಿದ ಎಲ್ಲಾ ಬಳಕೆದಾರರ ಶುಲ್ಕಕ್ಕೂ ರಶೀಧಿಯನ್ನು ನೀಡಲಾಗುತ್ತದೆ ಎಂದು ವೈದ್ಯಾಧಿಕಾರಿಗಳು ಹೇಳರುತ್ತಾರೆ. ಬಳಕೆದಾರರ ಶುಲ್ಕದಿಂದ ಬಂದ ಹಣ ಹಾಗೂ ಮಾಡಿದ ಖರ್ಚಿನ ಪೂರ್ಣವಿವರವನ್ನು ತಿಂಗಳಗೊಮ್ಮೆ ಆಯಾ ರೆಫರಲ್ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರಿಗೆ ಮತ್ತು 3 ತಿಂಗಳಗೊಮ್ಮೆ ನಡೆಯುವ ಸಂದರ್ಶಕ ಮಂಡಳಯ ಸಭೆಯಲ್ಲಿ ಸದಸ್ಯರಿಗೆ ನೀಡಲಾಗುತ್ತದೆ ಎಂದು ತಿಳಸಿದ್ದಾರೆ. ತುರ್ತುಪರಿಸ್ಥಿತಿಯ ಔಷಧಿಗಳನ್ನು ಕೊಳ್ಳಲು, ಸಲಕರಣೆಗಳ ದುರಸ್ತಿಗೆ, ಪೋಟೋ ಹಾಗೂ ಲೇಖನ ಸಾಮಗ್ರಿಗಳಗೆ ಬಳಕೆದಾರರ ಶುಲ್ಕವನ್ನು ಬಳಸಲಾಗುತ್ತದೆ ಎಂದು ತಿಳಸಿದ್ದಾರೆ. ಬಹಳಷ್ಟು ವೈದ್ಯಾಧಿಕಾರಿಗಳ ಅಭಿಪ್ರಾಯವೆಂದರೆ ಬಳಕೆದಾರರ ಶುಲ್ಕದ ಹಣವನ್ನು ಉಪಯೋಗಿಸಿ ಔಷಧಿಗಳನ್ನು ತಾವು ಕೊಳ್ಳುವುದರ ಬದಲು ಅದನ್ನು ಕೇಂದ್ರ ಔಷಧಾಲಯವು ಸರಬರಾಜು ಮಾಡಿದರೆ ಉತ್ತಮ.

## 2.7 ಕೆಲಸಕ್ಕೆ ಸಂಬಂದಿಸಿದಂತೆ

ಹೆರಿಗೆ ಆಸ್ಪತ್ರೆಯ ಎಲ್ಲಾ ವೈದ್ಯಾಧಿಕಾರಿಗಳು ಹೇಳರುವ ಹಾಗೆ ದಿನದಲ್ಲಿ 7 ಗಂಟೆಗಳ ಕಾಲ ಕೆಲಸ ನಿರ್ವಹಿಸುತ್ತಿದ್ದು, ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಕರೆಯ ಮೇರೆಗೆ ಕಾರ್ಯನಿರ್ವಹಿಸುವುದಾಗಿ ತಿಳಸಿದ್ದಾರೆ. ಅರ್ಧದಷ್ಟು ವೈದ್ಯರು ಒಂದಕ್ಕಿಂತ ಹೆಚ್ಚು ಹೆರಿಗೆ ಆಸ್ಪತ್ರೆ ಅಥವಾ ಯು.ಎಪ್.ಡಬ್ಲ್ಯು.ಸಿಯಲ್ಲಿ ಇನ್-ಚಾರ್ಜ್ ಆಗಿ ಕಾರ್ಯನಿರ್ವಹಿಸುತ್ತಾರೆ. ಎಲ್ಲಾ ವೈದ್ಯರೂ ಆಸ್ಪತ್ರೆಗಳಲ್ಲಿ ತಮ್ಮ ವೈದ್ಯಕೀಯ

ವೃತ್ತಿಯಲ್ಲದೆ ಇತರೆ ಕೆಲಸಗಳಾದ ಆಸ್ಪತ್ರೆಯ ಮೇಲ್ವಿಚಾರಣೆ, ಆಡಳತಾತ್ಮಕ ಕೆಲಸ, ಆಪ್ತ ಸಮಾಲೋಚನೆ, ಆರೋಗ್ಯ ಶಿಬಿರಗಳನ್ನು ಏರ್ಪಡಿಸುವುದು, ಅರಿವು ಕಾರ್ಯಕ್ರಮ, ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತಿರುವುದಾಗಿ ತಿಳಸಿದ್ದಾರೆ.

ವೈದ್ಯಾಧಿಕಾರಿಗಳಲ್ಲಿ ಕೇವಲ ಶೇ.25 ರಷ್ಟು ಜನರು ಮಾತ್ರ ತಮಗೆ ಕೆಲಸದ ಬಗ್ಗೆ ಸಂಪೂರ್ಣ ತೃಪ್ತಿ ಇರುವುದಾಗಿ ಹಾಗೂ ಇನ್ನೂ ಕಾಲು ಭಾಗ ವೈದ್ಯರು ತಮಗೆ ಸಂಪೂರ್ಣ ಅತೃಪ್ತಿ ಇರುವುದಾಗಿ ತಿಳಸಿದ್ದಾರೆ. ಇವರ ಅತೃಪ್ತಿಗೆ ಕಾರಣವೆಂದರೆ ಮೂಲಸೌಕರ್ಯಗಳ ಕೊರತೆ ಅಂದರೆ ಕಳಪೆಗೊಂಡ ಕಟ್ಟಡ, ಶೌಚಾಲಯಗಳಲ್ಲಿ ನೀರಿನ ವ್ಯವಸ್ಥೆ ಇಲ್ಲದಿರುವುದು, ಹಾಗೂ ಕೆಲಸದ ವಾತಾವರಣಕ್ಕೆ ಸಂಬಂದಿಸಿದಂತೆ ಕಡಿಮೆ ವೇತನ, ಬಿಡುವಿಲ್ಲದ ಕೆಲಸ, ಕೆಲಸದ ಒತ್ತಡ, ಉದ್ವೇಗ ಇತ್ಯಾದಿ.

ಕೆಲಸದ ಸ್ಥಳದಲ್ಲಿ ಅವರಿಗೆ ತಮ್ಮ ಹಿರಿಯ ಅಧಿಕಾರಿಗಳಂದ ಸಹೋದ್ಯೋಗಿಗಳಂದ ಮತ್ತು ಕಿರಿಯ ಅಧಿಕಾರಿಗಳಂದ ಸಹಕಾರ ಸಿಗುತ್ತಿರುವುದಾಗಿ ತಿಳಸಿದ್ದಾರೆ. ಕೆಲವು ಅಧಿಕಾರಿಗಳಗೆ ಗುಂಪು 'ಡಿ'ಯ ಕೆಲಸಗಾರರಿಂದ ಅಸಮಾದಾನವಾಗಿರುತ್ತದೆ, ಏಕೆಂದರೆ ಅವರುಗಳು ಮೇಲಾಧಿಕಾರಿಗಳ ಆದೇಶವನ್ನು ಕೇಳುವುದಿಲ್ಲ.

12 ಹೆರಿಗೆ ಆಸ್ಪತ್ರೆಯಲ್ಲಿ 2 ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳು ಹೇಳರುವ ಹಾಗೆ ಅವರುಗಳು ರೋಗಿಗಳ ಜೊತೆ ವ್ಯವಹರಿಸುವಾಗ ಸ್ವಲ್ಪ ತೊಂದರೆಗಳನ್ನು ಅನುಭವಿಸಿರುವುದಾಗಿ ತಿಳಸಿದರು. ಆದರೆ ಯಾರೂ ತಮ್ಮ ಉನ್ನತ ಅಧಿಕಾರಿಗಳಂದ ತೊಂದರೆಯಾಗಿರುವುದಾಗಿ ವರದಿ ಮಾಡಿಲ್ಲ.

**2.8 ಭ್ರಷ್ಟಾಚಾರ ಹಾಗು ಕುಂದು ಕೊರತೆಗಳ ನಿವಾರಣೆ**

ವೈದ್ಯಾಧಿಕಾರಿಗಳು ಹೇಳರುವ ಹಾಗೆ ಹಣದ ರೂಪದಲ್ಲಿ ಅಥವಾ ವಸ್ತುವಿನ ರೂಪದಲ್ಲಿ ಉಡುಗೊರೆಯನ್ನು ಪಡೆಯುವುದು ಸಾಂಪ್ರದಾಯಕವಾಗಿ ನಡೆದುಬಂದಿಲ್ಲವೆಂದು ತಿಳಸಿದ್ದಾರೆ. ಹಾಗೆಯೇ ಅವರಿಗೆ ತಮ್ಮ ಸಿಬ್ಬಂದಿಗಳು ಅಥವಾ ಸಹೋದ್ಯೋಗಿಗಳು ಬಳಕೆದಾರರಿಂದ ಉಡುಗೊರೆಯುನ್ನು ಪಡೆದಿರುವ ಬಗ್ಗೆ ಅರಿವಿಲ್ಲವೆಂದು ವರದಿಸಿರುತ್ತಾರೆ.

ಸಾರ್ವಜನಿಕ ದೂರು ನಿರ್ವಹಣೆಯ ವ್ಯವಸ್ಥೆಯು ಅಸ್ಥಿತ್ವದಲ್ಲಿರುವುದಾಗಿ ತಿಳಸಿರುತ್ತಾರೆ. ಎಲ್ಲರೂ ವರದಿಸಿರುವ ಹಾಗೆ ನಾಗರಿಕ ಸನ್ನದ್ಧಿನ ವಿವರವನ್ನು ರೋಗಿಗಳಗೆ ಕಾಣುವ ಹಾಗೆ ಆಸ್ಪತ್ರೆಯ ಗೋಡೆಗಳಲ್ಲಿ ಬರೆಸಲಾಗಿದೆ. ಹೆಚ್ಚಿನ ಸಂದರ್ಭಗಳಲ್ಲಿ (83%) ದೂರುಗಳನ್ನು ಬರೆದು, ಹೆರಿಗೆ ಆಸ್ಪತ್ರೆಯಲ್ಲಿರುವ ದೂರು ಪೆಟ್ಟಿಗೆಯಲ್ಲಿ ಹಾಕುತ್ತಾರೆ ಎಂದು ತಿಳಸಿದ್ದಾರೆ. ಹಾಗೂ ಒಳರೋಗಿಗಳಗೆ ತಾವು ಡಿಸ್ಚಾರ್ಜ್ ಆಗುವ ಸಂದರ್ಭದಲ್ಲಿ

ಅವರ ಅನಿಸಿಕೆಗಳನ್ನು ಬರೆಯಲು ಪ್ರತಿಕ್ರಿಯೆಯ ಹಾಳೆಯನ್ನು (feedback formats) ನೀಡಲಾಗುತ್ತದೆ. ಅದರಲ್ಲಿ ಅವರು ಹೆರಿಗೆ ಆಸ್ಪತ್ರೆಯಲ್ಲಿ ತಂಗಿದ್ದ ಸಮಯದಲ್ಲಿ ಆದ ಸಮಸ್ಯೆಗಳನ್ನು ಸ್ಪಷ್ಟವಾಗಿ ಬರೆಯಬಹುದು. ವೈದ್ಯಕೀಯ ಅಧಿಕಾರಿಗಳು ಹೇಳಿರುವ ಹಾಗೆ ರೋಗಿಗಳು ನೇರವಾಗಿ ಇವರ ಬಳಿ ಬಂದು ದೂರನ್ನು ದಾಖಲಿಸಬಹುದು, ಹಾಗೂ ಸಿಬ್ಬಂದಿಗಳ ವಿರುದ್ಧ ರೋಗಿಗಳು ದೂರನ್ನು ನೀಡಿದರೆ ಅದನ್ನು ನೇರವಾಗಿ ಬಗೆಹರಿಸಲಾಗುತ್ತದೆ. ಅಂತಹ ಸಂದರ್ಭದಲ್ಲಿ ಇಬ್ಬರನ್ನು ಒಟ್ಟಿಗೆ ಕರೆದು ಸಮಸ್ಯೆಯನ್ನು ಬಗೆ ಹರಿಸುವುದಾಗಿ ತಿಳಿಸಿದ್ದಾರೆ.

### 2.9 ಕಳೆದ ಮೂರು ವರ್ಷಗಳಲ್ಲಿ ಕಂಡ ಬದಲಾವಣೆಗಳು ಮತ್ತು ಅದರ ಮುಂದಿನ ಸುಧಾರಣೆಗಾಗಿ ಸಲಹೆಗಳು

12 ಹೆರಿಗೆ ಆಸ್ಪತ್ರೆಯಲ್ಲಿ ನಡೆಸಿದ ಸಮೀಕ್ಷೆಯಲ್ಲಿ 9 ವೈದ್ಯಾಧಿಕಾರಿಗಳು ಹೆರಿಗೆ ಆಸ್ಪತ್ರೆಯಲ್ಲಿ ಕೆಲವೊಂದು ಸುಧಾರಣೆಗಳು ಕಂಡುಬಂದಿದ್ದು, ಆ ಸುಧಾರಣೆಗಳೆಂದರೆ ಮೂಲಭೂತ ಸೌಕರ್ಯಗಳಲ್ಲಿ ಸುಧಾರಣೆ, ಕಟ್ಟಡಗಳು ಉತ್ತಮ ಸ್ಥಿತಿಯಲ್ಲಿರುವುದು, ಎನ್ ಎಸ್ ಟಿ ಮಿಷನ್ ನೀಡಿರುವುದು, ಆಸ್ಪತ್ರೆಯ ಸುತ್ತಾಮುತ್ತಾ ಮತ್ತು ಆಸ್ಪತ್ರೆಯ ಒಳಗೆ ಸ್ವಚ್ಛತೆ ಹೆಚ್ಚಾಗಿರುವುದು. ಸಂದರ್ಶನದಲ್ಲಿ ಎಲ್ಲಾ 12 ವೈದ್ಯಾಧಿಕಾರಿಗಳು ಸಿಬ್ಬಂದಿಗಳ ನೇಮಕ್ಕೆ ಒತ್ತು ನೀಡಬೇಕು ಎಂದು ತಿಳಿಸಿದ್ದಾರೆ, ಅದರಲ್ಲೂ ಸ್ಟಾಫ್ ನರ್ಸ್‌ಗಳ ಹೆಚ್ಚಳವಾಗಬೇಕು ಎಂದು 5 ವೈದ್ಯಾಧಿಕಾರಿಗಳು ತಿಳಿಸಿದರು.

#### 2.9.1 ಕಳೆದ ಹತ್ತು ವರ್ಷಗಳಲ್ಲಿ ಆಗಿರುವ ಬದಲಾವಣೆಗಳು

ಪಿಎಸಿಯು ಹತ್ತು ವರ್ಷಗಳ ಹಿಂದೆ ಈಗಿನಂತೆಯೇ ಬಿಬಿಎಂಪಿಯ ಹೆರಿಗೆ ಆಸ್ಪತ್ರೆಗಳ ಸೇವೆ ಕುರಿತು ಒಂದು ಅಧ್ಯಯನವನ್ನು ನಡೆಸಿತ್ತು. 2000 ಮತ್ತು 2010 ರಲ್ಲಿ ನಡೆಸಿದ ಸಿ.ಆರ.ಸಿ ಸಮೀಕ್ಷೆಯ ಸಾರಂಶದಿಂದ ಕಂಡು ಬಂದ ಅಂಶಗಳನ್ನು ತುಲನೆ ಮಾಡಿ ನೋಡಿದಾಗ ಕೆಲವೊಂದು ಬದಲಾವಣೆಗಳು ಕಳೆದ ಹತ್ತು ವರ್ಷಗಳಲ್ಲಿ ಆಗಿರುವುದನ್ನು ಸೂಚಿಸುತ್ತದೆ ಅವುಗಳೆಂದರೆ-ಹೆಚ್ಚು ಸೌಲಭ್ಯಗಳು, ಬಳಕೆದಾರರ ಶುಲ್ಕದ ಬಗ್ಗೆ ಅರಿವು ಹೆಚ್ಚಾಗಿರುವುದು, ಒಳ್ಳೆಯ ಬದಲಾವಣೆಗಳಾಗಿದ್ದು, ಭ್ರಷ್ಟಾಚಾರವು ಪ್ರಸ್ತುತದಲ್ಲಿಯು ಚಾಲ್ತಿಯಲ್ಲಿದ್ದು, ಹಾಗೂ ಉಚಿತವಾಗಿ ಔಷಧಿಯನ್ನು ಪಡೆಯುವ ಪ್ರಮಾಣವು ತೀವ್ರವಾಗಿ ಇಳಿಮುಖವಾಗಿರುವುದು ವಿಷಾದದ ಸಂಗತಿಯಾಗಿದೆ.

| | 2000 ಅಧ್ಯಯನದ ಸ್ಥಿತಿ | ಪ್ರಸ್ತುತ ಅಧ್ಯಯನದ ಸ್ಥಿತಿ |
|---|---|---|
| 1 | ಭ್ರಷ್ಟಾಚಾರ ಚಾಲ್ತಿಯಲ್ಲಿರುವುದು | |
| | ಎಲ್ಲಾ ಸೇವೆಗಳಿಗೂ ಸಿಬ್ಬಂದಿಗಳಿಂದ ಹಣದ ನಿರೀಕ್ಷೆ ಇರುವುದು. ಶೇ. 90ರಷ್ಟು ಪ್ರತಿಕ್ರಿಯೆಗಾರರು ವರದಿ ಮಾಡಿರುವ ಹಾಗೆ ಹೆರಿಗೆ ಆಸ್ಪತ್ರೆಯಲ್ಲಿ ಒಂದಲ್ಲ ಒಂದು ಸೇವೆಗೆ ಲಂಚವನ್ನು ಕೊಡಲೇ ಬೇಕಾಗಿರುವುದು ಇದು ಸರಿಸುಮಾರು ರೂ.700 ಆಗಿರುತ್ತದೆ. ಸುಮಾರು ಶೇ.70 ರಷ್ಟು ಜನರು ತಮ್ಮ ಮಗುವನ್ನು ನೋಡಲು ಹಣವನ್ನು ಕೊಟ್ಟಿರುತ್ತಾರೆ! ಪ್ರತಿ ಇಬ್ಬರಲ್ಲಿ ಒಬ್ಬ ಬಳಕೆದಾರರು ಹೆರಿಗೆಗೆ ಹಣವನ್ನು ನೀಡಿರುತ್ತಾರೆ. | ಎಲ್ಲಾ ಸೇವೆಗಳಿಗೂ ಸಿಬ್ಬಂದಿಗಳಿಂದ ಹಣದ ನಿರೀಕ್ಷೆ ಇರುವುದು. ಶೇ. 70ರಷ್ಟು ಪ್ರತಿಕ್ರಿಯೆಗಾರರು ವರದಿ ಮಾಡಿರುವ ಹಾಗೆ ಹೆರಿಗೆ ಆಸ್ಪತ್ರೆಯಲ್ಲಿ ಒಂದಲ್ಲ ಒಂದು ಸೇವೆಗೆ ಲಂಚವನ್ನು ಕೊಡಲೇಬೇಕಾಗಿರುವುದು, ಇದು ಸರಿಸುಮಾರು ರೂ.3000 ಆಗಿರುತ್ತದೆ. ಸುಮಾರು ಶೇ30 ರಷ್ಟು ಜನರು ತಮ್ಮ ಮಗುವನ್ನು ನೋಡಲು ಹಣವನ್ನು ಕೊಟ್ಟಿರುತ್ತಾರೆ! ಪ್ರತಿ ಮೂವರಲ್ಲಿ ಒಬ್ಬರು ಹೆರಿಗೆಗೆ ಹಣವನ್ನು ನೀಡಿರುತ್ತಾರೆ. |
| 2 | ಹೆರಿಗೆ ಆಸ್ಪತ್ರೆಯ ಮೂಲಸೌಕರ್ಯಗಳು | |
| | ಹೆಚ್ಚಿನ ಸಿಬ್ಬಂದಿಗಳು ಹೆರಿಗೆ ಆಸ್ಪತ್ರೆಯಲ್ಲಿ ಸೌಲಭ್ಯಗಳ ಕೊರತೆ, ಸಿಬ್ಬಂದಿಗಳ ಕೊರತೆ, ಹಾಗೂ ಸಾಮಾಗ್ರಿಗಳ ಕೊರತೆಯ ಬಗ್ಗೆ ದೂರಿರುತ್ತಾರೆ. | ಶೇ.83ರಷ್ಟು ಸಿಬ್ಬಂದಿಗಳು ವರದಿಸಿರುವ ಹಾಗೆ ಹೆರಿಗೆ ಆಸ್ಪತ್ರೆಗಳಲ್ಲಿ ಎಲ್ಲಾ ಮೂಲಸೌಕರ್ಯಗಳು, ಸಾಕಷ್ಟು ಔಷಧಿಗಳ ಪೂರೈಕೆ ಇರುವುದಾಗಿ ತಿಳಿಸಿದ್ದಾರೆ. ಆದರೆ ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿಗಳು ಸಿಬ್ಬಂದಿಯ ಕೊರತೆಯಿರುವುದಾಗಿ ಪ್ರತಿಕ್ರಿಯಿಸಿದ್ದಾರೆ. |
| 3 | ರೋಗಿಗಳಿಗೆ ಸೇವೆಗಳು | |
| | ಶೇ. 39ರಷ್ಟು ರೋಗಿಗಳು ಮಾತ್ರ ಉಚಿತ ಔಷಧಿಗಳನ್ನು ಹೆರಿಗೆ ಆಸ್ಪತ್ರೆಗಳಿಂದ ಪಡೆದಿರುವುದಾಗಿ ತಿಳಿಸಿದ್ದಾರೆ. ಕುತೂಹಲಕಾರಿ ಅಂಶವೆಂದರೆ, ಎಲ್ಲಾ ವೈದ್ಯರು, ನರ್ಸ್‌ಗಳು ಹಾಗೂ ಇತರ ಸಿಬ್ಬಂದಿಗಳು ಹೇಳಿರುವ ಹಾಗೆ ಎಲ್ಲಾ ರೋಗಿಗಳಿಗೂ ಎಲ್ಲಾ ಸಮಯದಲ್ಲಿಯೂ ಉಚಿತವಾಗಿ ಔಷಧಿಗಳನ್ನು ಕೊಡುವುದಾಗಿ ತಿಳಿಸಿದ್ದಾರೆ. | ಶೇ.12ರಷ್ಟು ರೋಗಿಗಳು ಮಾತ್ರ ಹೆರಿಗೆ ಆಸ್ಪತ್ರೆಗಳಿಂದ ಉಚಿತ ಔಷಧಿಗಳನ್ನು ಪಡೆದಿರುವುದಾಗಿ ತಿಳಿಸಿದ್ದಾರೆ. ಕುತೂಹಲಕಾರಿ ಅಂಶವೆಂದರೆ, ಎಲ್ಲಾ ವೈದ್ಯರು ಹೇಳಿರುವ ಹಾಗೆ ಎಲ್ಲಾ ರೋಗಿಗಳಿಗೂ ಎಲ್ಲಾ ಸಮಯದಲ್ಲಿಯೂ ಉಚಿತವಾಗಿ ಔಷಧಿಗಳನ್ನು ಕೊಡುವುದಾಗಿ ತಿಳಿಸಿದ್ದಾರೆ |
| 4 | ಒಟ್ಟಾರೆ ತೃಪ್ತಿ | |
| | ಕೇವಲ ಮೂರನೇ ಒಂದು ಭಾಗ ಜನರು ಹೆರಿಗೆ ಆಸ್ಪತ್ರೆಯ ಎಲ್ಲಾ ಸೇವೆಗಳ ಬಗ್ಗೆ ಸಂಪೂರ್ಣ ತೃಪ್ತಿಯನ್ನು ಹೊಂದಿದ್ದಾರೆ. | ಒಟ್ಟಾರೆ ತೃಪ್ತಿಯು ಹಾಗೆ ಇದ್ದು, ಕೇವಲ ಶೇ.31 ರಷ್ಟು ಬಳಕೆದಾರರು ಮಾತ್ರ ಸಂಪೂರ್ಣ ತೃಪ್ತಿಯನ್ನು ಹೊಂದಿದ್ದಾರೆ. |

## 2.10 ಸಂಶೋಧನೆಯನ್ನು ಆಧಾರಿಸಿ ನಂತರದಲ್ಲಿ ಕೈಗೊಂಡ ಚಟುವಟಿಕೆಗಳು

ಈ ಸಂಶೋಧನೆಯಿಂದ ಕಂಡು ಬಂದ ಅಂಶಗಳನ್ನು ಮುಖ್ಯ ಆರೋಗ್ಯಾಧಿಕಾರಿ ಮತ್ತು ಅವರ ತಂಡದವರಿಗೆ ಮಂಡಿಸಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಯಿತು. ಅದರಂತೆ ಹೆರಿಗೆ ಆಸ್ಪತ್ರೆಯಲ್ಲಿ ಗರ್ಭಿಣಿ ಆರೋಗ್ಯಕ್ಕೆ ಸಂಬಂಧಿಸಿದಂತೆ ಅವರಿಗೆ ಸಿಗುವ ಸೌಲಭ್ಯಗಳನ್ನು ತಿಳಿಸುವ ಮಾಹಿತಿಯನ್ನು ಬಳಕೆದಾರರರಿಗೆ ನೀಡಿದರೆ, ಭ್ರಷ್ಟಾಚಾರವನ್ನು ಕಡಿಮೆ ಮಾಡಬಹುದು. ಈ ನಿಟ್ಟಿನಲ್ಲಿ ಬಳಕೆದಾರರ ಶುಲ್ಕ ಮತ್ತು ಸಾರ್ವಜನಿಕ ದೂರುನಿರ್ವಹಣೆಯ ಮಾಹಿತಿಯ ಚಾರ್ಟ್‌ಗಳನ್ನು ತಯಾರಿಸಿ ಎಲ್ಲಾ ಹೆರಿಗೆ ಆಸ್ಪತ್ರೆಗಳಲ್ಲಿಯೂ ಪ್ರದರ್ಶಿಸಲಾಯಿತು. ಇದರ ಜೊತೆಗೆ ಹೆರಿಗೆ ಆಸ್ಪತ್ರೆಯಲ್ಲಿ ಗರ್ಭಿಣಿ ಆರೋಗ್ಯಕ್ಕೆ ಸಂಬಂಧಿಸಿದಂತೆ ದೊರೆಯುವ ಎಲ್ಲಾ ಸೇವಾ ಸೌಲಭ್ಯಗಳ ಬಗೆಗಿನ ಮಾಹಿತಿ, ಯೋಜನೆಗಳ ಲಾಭಗಳು, ಹಾಗೂ ರೋಗಿಗಳ ಕರ್ತವ್ಯಗಳನ್ನು ಒಳಗೊಂಡ 'ರೋಗಿಗಳ ಸನ್ನದ್ದು'ನ್ನು ಸಿದ್ದಪಡಿಸಿ ಆರೋಗ್ಯದ ಅಧಿಕಾರಿಗಳಲ್ಲಿ ಹಂಚಿಕೊಳ್ಳಲಾಯಿತು.

ಇದಕ್ಕೆ ಸಂಬಂಧಿಸಿದಂತೆ ಆರೋಗ್ಯ ವಿಭಾಗದ ಅಧಿಕಾರಿಗಳು, ಇದನ್ನು ಓಪಿಡಿ ಪುಸ್ತಕದ ಒಂದು ಭಾಗವಾಗಿ ಮಾಡಿದರೆ ಹೆಚ್ಚು ಅನುಕೂಲವಾಗುತ್ತದೆ ಎಂದು ಸಲಹೆ ನೀಡಿದರು. ಏಕೆಂದರೆ ಪ್ರತಿಯೊಬ್ಬರಿಗೂ ನೋಂದಣಿ ಸಮಯದಲ್ಲಿ ಓಪಿಡಿ ಪುಸ್ತಕವನ್ನು ನೀಡಲಾಗುತ್ತದೆ. ಇದರಿಂದ ಗರ್ಭಿಣಿ ಮಹಿಳೆಯರು ತಮ್ಮ ಗರ್ಭಾವಸ್ಥೆಯ ಎಲ್ಲಾ ಹಂತದ ಸಮಯದಲ್ಲಿಯೂ ಮತ್ತು ಬಾಣಂತನದಲ್ಲಿಯೂ ಇದನ್ನು ಉಪಯೋಗಿಸುವುದರಿಂದ ಮಾಹಿತಿಯು ಅವರಿಗೆ ಉಪಯುಕ್ತವಾಗಿರುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಸಂದರ್ಶಕ ಮಂಡಳಿಯ ಸದಸ್ಯರು ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಬೇಕಾದ ಸಾಮರ್ಥ್ಯವನ್ನು ಹೆಚ್ಚಿಸಬೇಕಾಗಿರುವುದರ ಬಗ್ಗೆ ಗಮನಹರಿಸಬೇಕು. ಸಂದರ್ಶಕ ಮಂಡಳಿಯ ಸದಸ್ಯರುಗಳ ಪಾತ್ರ ಮತ್ತು ಜವಾಬ್ದಾರಿಗಳಲ್ಲಿ ಅಗತ್ಯ ತಿದ್ದುಪಡಿಗಳನ್ನು ಮಾಡುವುದರ ಮೂಲಕ ಅವರು ಆಯವ್ಯಯದ ಕ್ರಿಯೆಯಲ್ಲಿ ಭಾಗವಹಿಸಲು ಮತ್ತು ಹಣಕಾಸಿನ ಖರ್ಚುವೆಚ್ಚಗಳನ್ನು ಪರಿಣಾಮಕಾರಿಯಾಗಿ ಮೇಲ್ವಿಚಾರಣೆ ಮಾಡಲು ಕೆಲವು ನಿಯಂತ್ರಿತ ಅಧಿಕಾರಗಳನ್ನು ನೀಡಬೇಕು.

ಬಳಕೆದಾರರ ಶುಲ್ಕದ ಮಾರ್ಗದರ್ಶನದಲ್ಲಿ ಮಾರ್ಪಡುಗಳನ್ನು ಮಾಡಿದರೆ, ಆ ಹಣವನ್ನು ಪರಿಣಾಮಕಾರಿಯಾಗಿ ಅವಶ್ಯಕ ಸೇವೆಗಳಿಗೆ ಅಂದರೆ ಒಳರೋಗಿಗಳಿಗೆ ಹಾಲನ್ನು ಕೊಳ್ಳಲು ಬಳಸಬಹುದು. ಹಾಗೆಯೇ ಇನ್ನೊಂದು ಪ್ರಯತ್ನವನ್ನು ಮಾಡುವ ಮೂಲಕ ತುರ್ತು ಔಷಧಿಗಳು ಯಾವುದು ಮತ್ತು ಯಾವ ಔಷಧಿಯನ್ನು ಕೊಳ್ಳಲು ಈ ಹಣವನ್ನು ಬಳಸಬಹುದು ಎಂದು ತಿಳಿಸುವ ಸುತ್ತೋಲೆಯನ್ನು ಹೊರಡಿಸುವ ಪ್ರಯತ್ನವನ್ನು ಮಾಡಬಹುದು ಎಂದು ಅಧಿಕಾರಿಗಳಿಗೆ ಸೂಚಿಸಲಾಯಿತು.

# 3. ಆಯವ್ಯಯದ ವಿಶ್ಲೇಷಣೆ

ಹೆರಿಗೆ ಆಸ್ಪತ್ರೆಯ ಖರ್ಚು ಮತ್ತು ವೆಚ್ಚವನ್ನು ವಿಶ್ಲೇಷಿಸಲು ಆಯವ್ಯಯದ ಅಧ್ಯಯನವನ್ನು ಕೈಗೊಳ್ಳಲಾಯಿತು. ಹೆರಿಗೆ ಆಸ್ಪತ್ರೆಯ ಆಯವ್ಯಯ ಮತ್ತು ವೆಚ್ಚದ ಬಗ್ಗೆ ಮಾಹಿತಿ ಸಂಗ್ರಹಣೆ ಮಾಡುವುದು ಹಾಗೂ ಅದನ್ನು ಪರಿಶೀಲಿಸುವುದು ಬಹಳ ಸಮಯ ತೆಗೆದುಕೊಳ್ಳುವ ಚಟುವಟಿಕೆಯಾಗಿದ್ದರಿಂದ, ಬಿ.ಬಿ.ಎಂ.ಪಿಯ 3 ವಲಯಗಳಲ್ಲಿ ತಲಾ ಒಂದೊಂದು ಹೆರಿಗೆ ಆಸ್ಪತ್ರೆಯನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಈ ಮೂರು ಹೆರಿಗೆ ಆಸ್ಪತ್ರೆಗಳೆಂದರೆ: ದಕ್ಷಿಣ ವಲಯದಲ್ಲಿ–ಗವಿಪುರಂ ಗುಟ್ಟ ಹಳ್ಳಿ ಹೆರಿಗೆ ಆಸ್ಪತ್ರೆ, ಪೂರ್ವ ವಲಯದಲ್ಲಿ– ಕಾಕ್ಸ್ ಟೌನ್ ಹೆರಿಗೆ ಆಸ್ಪತ್ರೆ, ಪಶ್ಚಿಮ ವಲಯದಲ್ಲಿ–ನಂದಿನಿ ಲೇ ಔಟ್ ಹೆರಿಗೆ ಆಸ್ಪತ್ರೆ.

ಈ ಚಟುವಟಿಕೆಗೆ ಮೂರು ಹೆರಿಗೆ ಆಸ್ಪತ್ರೆಗಳು ಹಾಗೂ ಅದಕ್ಕೆ ಸಂಬಂದಿಸಿದ ರೆಫರಲ್ ಆಸ್ಪತ್ರೆಗಳಿಂದ ಆಯಾ ಆಸ್ಪತ್ರೆಗಳಿಗೆ ಸಂಬಂದಿಸಿದ ಆಯವ್ಯಯ, ಆಸ್ಪತ್ರೆಯ ಆದಾಯ ಹಾಗೂ ವೆಚ್ಚಗಳಿಗೆ ಸಂಬಂದಿಸಿದ ದಾಖಲೆಗಳನ್ನು ಸಂಗ್ರಹಿಸಲಾಯಿತು. ಇದು ಬಿಬಿಎಂಪಿಯ ಸಮಗ್ರ ಆರೋಗ್ಯ ಆಯವ್ಯಯವನ್ನು ಒಳಗೊಂಡಿದೆ. ಕಳೆದ ಹಣಕಾಸಿನ ವರ್ಷದ (2008–09 ಮತ್ತು 2009–10) ಅವಧಿಯಲ್ಲಿ ಹೆರಿಗೆ ಆಸ್ಪತ್ರೆಗಳಿಂದ ಬಜೆಟ್ ಇನ್‌ಫಾರ್‌ಮೆಶನ್ ಡಾಟ ಶೀಟ್'(ಬಿಡ್ಸ್) ಹಾಗು ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳ ಸಂಬಳದ ವಿವರಗಳ ಜೊತೆಗೆ ಈ ಕೆಳಗೆ ಹೇಳಿದ ಮಾಹಿತಿಯನ್ನು ಪಡೆಯಲಾಯಿತು.

**1. ಬಳಕೆದಾರರ ಶುಲ್ಕ**

- 2009–10ರ ಬಳಕೆದಾರರ ಶುಲ್ಕದ ಸಂಗ್ರಹ ಮತ್ತು ವೆಚ್ಚಕ್ಕೆ ಸಂಬಂದಿಸಿದ ಬ್ಯಾಂಕ್ ಹೇಳಿಕೆ.
- 2009–10ರ ವೆಚ್ಚದ ರಶೀದಿಯ ವಿವರಗಳು
- 2009 ಸೆಪ್ಟೆಂಬರ್ ತಿಂಗಳ ಬಿಲ್ ಪುಸ್ತಕ, ಕಿರಿದಿ ಪುಸ್ತಕ, ಮತ್ತು ನಗದು ಪುಸ್ತಕದ ನಕಲು.
- 2009 ಸೆಪ್ಟೆಂಬರ್ ತಿಂಗಳ ಹೊರರೋಗಿಗಳ ನೊಂದಣಿ, ನಾಯಿ ಕಚ್ಚಿರುವುದಕ್ಕೆ ನೀಡುವ ಚುಚ್ಚುಮದ್ದಿನ ನೊಂದಣಿ ಪುಸ್ತಕ, ಒಳರೋಗಿಗಳ ನೊಂದಣಿ ಪುಸ್ತಕ, ಹಾಗೂ ಪ್ರಯೋಗಾಲಯದ ನೊಂದಣಿ ಪುಸ್ತಕಗಳ ನಕಲು.

**2. ಔಷಧಿಗಳು**

- 2009-10 ಸಾಲಿನ ಹೆರಿಗೆ ಆಸ್ಪತ್ರೆ ಮತ್ತು ಅದರ ರೆಫರಲ್ ಆಸ್ಪತ್ರೆಗಳ ವಾರ್ಷಿಕ ಅಂದಾಜಿನ ವಿವರಗಳು.
- 2009-10ರಲ್ಲಿ ಹೆರಿಗೆ ಆಸ್ಪತ್ರೆಗಳ ಇಂಡೆಂಟ್ ಪ್ರತಿಗಳು.
- 2009-10ನೇ ಸಾಲಿನ ಬಿಬಿಎಂಪಿ ಕೇಂದ್ರ ಔಷಧಿ ಉಗ್ರಾಣದಿಂದ 'ದಾಸ್ತಾನು ರಿಜಿಸ್ಟರ್‌ನ ನಕಲು ಪ್ರತಿ'

**3. ಒಳರೋಗಿಗಳಿಗೆ ಆಹಾರ**

- 2009-10ರ ಸಾಲಿನಲ್ಲಿ ಒಳರೋಗಿಗಳಿಗೆ ನೀಡಿದ ಹಾಲಿನ ಪುಸ್ತಕದ ವಿವರದ ಪ್ರತಿ.

**4. ಸಾಮಾಗ್ರಿಗಳು ಮತ್ತು ಇತರೆ ಮೂಲಭೂತ ಸೌಕರ್ಯಗಳು:**

ಹೆರಿಗೆ ಆಸ್ಪತ್ರೆಯಲ್ಲಿ ಲಭ್ಯವಿರುವ ಸಲಕರಣೆಗಳ ವಿವರ ಹಾಗು ಅವುಗಳ ಕಾರ್ಯಕ್ಷಮತೆಯ ಸ್ಥಿತಿಯನ್ನು ತಿಳಿಯಲು ಆಸ್ಪತ್ರೆಯ ಪುಸ್ತಕದ ಅಧ್ಯಯನ.

**5. 2008-09 ನೇ ಸಾಲಿನ ಲೆಕ್ಕಪರಿಶೋಧನೆಯ ವರದಿಗಳು.**

**3.1 ಆಯವ್ಯಯದ ವಿಶ್ಲೇಷಣೆಯಿಂದ ಕಂಡು ಬಂದ ಮುಖ್ಯ ಅಂಶಗಳು**

ಹೆರಿಗೆ ಆಸ್ಪತ್ರೆಯಲ್ಲಿರುವ ಲಭ್ಯವಿರುವ ಎಲ್ಲಾ ಸಲಕರಣೆಗಳ ಬಗ್ಗೆ ಮಾಹಿತಿ ನೀಡುವ ಒಂದು ಪುಸ್ತಕ ಲಭ್ಯವಿಲ್ಲ. ಆಸ್ಪತ್ರೆಯ ಪುಸ್ತಕವು ಕೆಲವೊಂದು ಸಲಕರಣೆಗಳನ್ನು ಮಾತ್ರ ಪಟ್ಟಿ ಮಾಡಿದೆ. ನಮ್ಮ ಅಧ್ಯಯನದಿಂದ ತಿಳಿದುಬಂದಂತೆ ಆಸ್ಪತ್ರೆಯಲ್ಲಿರುವ ಅತ್ಯಾವಶ್ಯಕ ಉಪಕರಣಗಳು ಈ ಪುಸ್ತಕದಲ್ಲಿ ದಾಖಲಾಗಿಲ್ಲ. ಹೀಗಾಗಿ ಅಸೆಟ್ ರಿಜಿಸ್ಟರ್‌ನ್ನು ನಿರಂತರವಾಗಿ ದಾಖಲಿಸಬೇಕು.

ಎಲ್ಲಾ ಹೆರಿಗೆ ಆಸ್ಪತೆಗಳಲ್ಲಿಯು ಒಂದೇ ತೆರನಾದ ರಿಜಿಸ್ಟರ್‌ಗಳನ್ನು ಬಳಸಲಾಗುತ್ತಿದ್ದರೂ, ಆ ರಿಜಿಸ್ಟರ್‌ಗಳಲ್ಲಿ ಏಕರೂಪವಾದ ಮಾಹಿತಿಗಳನ್ನು ದಾಖಲಿಸುವುದು ಕಂಡುಬಂದಿಲ್ಲ. ಹೀಗಾಗಿ ದಾಖಲೆಗಳ ನಿರ್ವಹಣಾ ವ್ಯವಸ್ಥೆಯಲ್ಲಿ ಏಕರೂಪತೆಯನ್ನು ತರುವುದು ಅತ್ಯಾವಶ್ಯಕವಾಗಿದೆ.

ಪ್ರತಿನಿತ್ಯ ಒಂದೇ ನಿರ್ಧಿಷ್ಟ ಪ್ರಮಾಣದ ಹಾಲನ್ನು ಎಲ್ಲಾ ಹೆರಿಗೆ ಆಸ್ಪತ್ರೆಗಳಲ್ಲಿ ಕೊಳ್ಳಲಾಗುತ್ತಿದೆಯೇ ವಿನಃ ಆಯಾ ದಿನದ ಒಳರೋಗಿಗಳ ಸಂಖ್ಯೆಗೆ ಅನುಗುಣವಾಗಿ

ಕೊಳ್ಳುತ್ತಿಲ್ಲ. ಹೀಗಾಗಿ ಒಳರೋಗಿಗಳಿಗೆ ಹಾಲಿನ ಪೂರೈಕೆ ವ್ಯವಸ್ಥೆಯನ್ನು ಸಮರ್ಪಕಗೊಳಿಸಬೇಕಾಗಿದೆ.

ಔಷಧಿಗಳ ಪೂರೈಕೆಗಾಗಿ ಬಳಕೆದಾರರ ಶುಲ್ಕವನ್ನು ಬಳಸಿಕೊಳ್ಳುವ ಪ್ರಕ್ರಿಯೆಯ ಬಗ್ಗೆ ಎಲ್ಲರಲ್ಲಿಯೂ ಒಂದು ಸಾಮಾನ್ಯ ತಿಳುವಳಿಕೆ ಇದೆ. ಆದರೂ ಸಹ ಅದರ ಬಳಕೆಯ ಬಗ್ಗೆ ದಾಖಲೆಗಳಲ್ಲಿ ಸಮರ್ಪಕ ಮಾಹಿತಿ ಹಾಗು ಪುರಾವೆಗಳನ್ನು ಒದಗಿಸುವಲ್ಲಿ ಹಿಂದುಳಿದಿರುವುದು ಕಂಡುಬರುತ್ತದೆ. ಖಾಸಗಿ ಔಷಧಿ ಅಂಗಡಿಯ ಧಾರಣೆ ಪಟ್ಟಿಯಲ್ಲಿ ಕೆಲವೊಂದು ತೊಡಕುಗಳು ಕಂಡಿವೆ.

ಸಾಮಾನ್ಯವಾಗಿ ಪ್ರತಿ ತಿಂಗಳು, ಆಸ್ಪತ್ರೆಗಳು ಇಂಡೆಂಟ್ ಸಲ್ಲಿಸುವ ಔಷಧಿಗಳ ಪ್ರಮಾಣವು ಕೇಂದ್ರ ಔಷಧಿ ಉಗ್ರಾಣದಿಂದ ಪೂರೈಕೆಯಾದ ಔಷಧಿಗಳ ಪ್ರಮಾಣಕ್ಕಿಂತಲೂ ಹೆಚ್ಚಾಗಿರುತ್ತದೆ ಹಾಗಾಗಿ ಉಗ್ರಾಣದ ಅಧಿಕಾರಿಗಳು ಔಷಧಿಗಳನ್ನು ಕೊಳ್ಳುವಲ್ಲಿ ಅಗತ್ಯ ಪ್ರಮಾಣ ಹಾಗೂ ಅವುಗಳ ಸಮರ್ಪಕ ಪೂರೈಕೆಯ ವ್ಯವಸ್ಥಿತ ಅಂದಾಜು ಮಾಡಬೇಕಾದ ಅವಶ್ಯಕತೆಯನ್ನು ಎತ್ತಿ ತೋರಿಸುತ್ತದೆ. ಬಹಳಷ್ಟು ಸಂದರ್ಭಗಳಲ್ಲಿ ತಾವು ನೀಡಿದ ಬೇಡಿಕೆ ಪ್ರಮಾಣಕ್ಕಿಂತ ಕಡಿಮೆ ಪ್ರಮಾಣದ ಔಷಧಿಯನ್ನು ಪೂರೈಸಲಾಗುತ್ತಿದೆ.

ದಾಖಲೆಗಳ ನಿರ್ವಹಣೆಯನ್ನು ನೋಡಿದಾಗ ಹಾಗೂ ವಿವಿಧ ಅಧಿಕಾರಿಗಳೊಂದಿಗೆ ಮಾತನಾಡಿದಾಗ ತಿಳಿದುಬಂದಂತೆ, ಹೆರಿಗೆ ಆಸ್ಪತ್ರೆಗಳ ಆಡಳಿತ, ವಿವಿಧ ಅನುಮತಿಗಳನ್ನು ಪಡೆಯುವ ವಿಧಾನ ಹಾಗು ಆಸ್ಪತ್ರೆಯ ದಾಖಲೆಗಳ ನಿರ್ವಹಣೆಯಲ್ಲಿ ಕೆಲವು ಗೊಂದಲಗಳು ಮತ್ತು ಅಸ್ಪಷ್ಟತೆಗಳು ಕಂಡುಬರುತ್ತದೆ. ಹೀಗಾಗಿ ಹೆರಿಗೆ ಆಸ್ಪತ್ರೆಗಳ ಆಡಳಿತ ಹಾಗು ಕಾರ್ಯನಿರ್ವಹಣೆಯಲ್ಲಿ ಸ್ಪಷ್ಟತೆ ಹಾಗೂ ಏಕರೂಪತೆಯನ್ನು ತರುವ ಸಲುವಾಗಿ ಒಂದು ವಿವರವಾದ 'ಕಾರ್ಯನಿರ್ವಹಣಾ ಪುಸ್ತಕ' (ಐ ಪಿ ಪಿ ಮ್ಯಾನುಯಲ್ ಪ್ರೊಟೋಕಾಲ್‌ಗೆ ಅನುಗುಣವಾಗಿ) ಇರುವುದು ಅವಶ್ಯಕವಾಗಿದೆ.

ಕೆಲವೊಂದು ಪ್ರಕರಣಗಳಲ್ಲಿ ಬಳಕೆದಾರರ ಶುಲ್ಕದ ಹಣದ ಜಮೆಯು ನಿಗದಿತವಾಗಿ ಪ್ರತಿದಿನ ನಡೆಯುತ್ತಿಲ್ಲ. ಓಪಿಡಿಯಲ್ಲಿ ನೋಂದಣಿಯಾಗಿರುವ ಪ್ರಕರಣಗಳಿಗೂ ಮತ್ತು ರಶೀದಿ ಪುಸ್ತಕದಿಂದ ನೀಡಿದ ರಶೀದಿಗಳ ಸಂಖ್ಯೆಗೂ ಹೊಂದಾಣಿಕೆಯಾಗಿರುವುದಿಲ್ಲ. ಓಪಿಡಿಯಲ್ಲಿ ನೋಂದಣಿಯಾದ ಪ್ರಕರಣದ ದಿನಾಂಕ ಮತ್ತು ರಶೀದಿಯನ್ನು ನೀಡಿದ ದಿನಾಂಕಗಳೆರಡು ಒಂದಕ್ಕೊಂದು ಹೊಂದಾಣಿಕೆಯಾಗುತ್ತಿಲ್ಲ.

ಹೆರಿಗೆ ಆಸ್ಪತ್ರೆಯ ವಾರ್ಷಿಕ ಆಯವ್ಯಯದ ಅಂದಾಜನ್ನು (ಬಜೆಟ್ ಇನ್‌ಫರ್‌ಮೇಶನ್ ಡಾಟ ಶೀಟ್) ಉಪಯುಕ್ತವಾಗಿ ಸಿದ್ಧಪಡಿಸಲು ಘಟಕಮಟ್ಟದಲ್ಲಿ ಎಲ್ಲಾ ಹಂತಗಳಲ್ಲಿಯೂ ಸಂಬಂದಪಟ್ಟ ಅಧಿಕಾರಿಗಳಿಂದ ಸರಿಯಾದ ಮಾರ್ಗದರ್ಶನ ಮತ್ತು ತರಬೇತಿಯನ್ನು

ನೀಡಬೇಕು. ಆಯವ್ಯಯದ ಸಿದ್ದತೆಯ ಸಮಯದಲ್ಲಿ ಸಂದರ್ಶಕ ಮಂಡಳಿಯ ಸದಸ್ಯರನ್ನು ಪಾಲ್ಗೋಳ್ಳುವಂತೆ ಮಾಡಿದರೆ ಸಮುದಾಯಕ್ಕೆ ಬೇಕಾಗುವ ಅಗತ್ಯತೆಗಳನ್ನು ಆಯವ್ಯಯದಲ್ಲಿ ಸೇರಿಸಬಹುದು. ಮಂಡಳಿಯ ಸದಸ್ಯರು ಇದರ ವೆಚ್ಚಗಳನ್ನು ಹೊರಗಿನವರಂತೆ ಮೇಲ್ವಿಚಾರಣೆಯನ್ನು ಮಾಡಲು ಅವಕಾಶ ನೀಡಿದರೆ ಹಣದ ದುರ್ಬಳಕೆಯನ್ನು ತಪ್ಪಿಸಬಹುದು.

ಬಳಕೆದಾರರ ಶುಲ್ಕದ ಉಪಯೋಗಕ್ಕೆ ಸಂಬಂದಿಸಿದಂತೆ ಮಾರ್ಗದರ್ಶನದಲ್ಲಿ ಮಾರ್ಪಾಡುಗಳನ್ನು ಮಾಡಿದರೆ, ಆ ಹಣವನ್ನು ಪರಿಣಾಮಕಾರಿಯಾಗಿ ಅವಶ್ಯಕ ಸೇವೆಗಳಿಗೆ ಅಂದರೆ ಒಳರೋಗಿಗಳಿಗೆ ಹಾಲನ್ನು ಕೊಳ್ಳಲು ಬಳಸಬಹುದು. ಹಾಗೆಯೇ ಇನ್ನೊಂದು ಪ್ರಯತ್ನವನ್ನು ಮಾಡುವ ಮೂಲಕ ತುರ್ತು ಔಷಧಿಗಳು ಯಾವುದು ಮತ್ತು ಯಾವ ಔಷಧಿಯನ್ನು ಕೊಳ್ಳಲು ಈ ಹಣವನ್ನು ಬಳಸಬಹುದು ಎಂದು ತಿಳಿಸುವ ಸುತ್ತೋಲೆಯನ್ನು ಹೊರಡಿಸುವ ಪ್ರಯತ್ನ ಮಾಡಬಹುದು.

### 3.2 ಆಂತರಿಕ ಲೆಕ್ಕಪರಿಶೋಧನೆಯ ವರದಿಯ ಅಧ್ಯಯನ

ಮೂರು ಹೆರಿಗೆ ಆಸ್ಪತ್ರೆಯ ಇತ್ತೀಚಿನ (2008-09) ಲೆಕ್ಕಪರಿಶೋಧನೆಯ ವರದಿಯನ್ನು ಬಿ.ಬಿ.ಎಂ.ಪಿ ಆಡಿಟರ್ ಜನರಲ್ ಕಛೇರಿಯಿಂದ ಪಡೆದು ಅದರ ಅಧ್ಯಯನ ಮಾಡಲಾಯಿತು. ಲೆಕ್ಕಪರಿಶೋಧನೆಯ ವರದಿಯು ಈ ಕೆಳಗಿನ ಅಂಶಗಳನ್ನು ಒಳಗೊಂಡಿದೆ.

- ಹಿಂದಿನ ಸಾಲಿನ ಲೆಕ್ಕ ತಪಾಸಣೆ ವರದಿ ಬಗ್ಗೆ ತೆಗೆದುಕೊಂಡಿರುವ ಕ್ರಮ.
- ನಗದು ಪುಸ್ತಕದ ಪರಿಶೀಲನೆ.
- ಹೆರಿಗೆ ಆಸ್ಪತ್ರೆಯ ಆರ್ಥಿಕ ಪರಿಸ್ಥಿತಿ ವಿವರ
- ರಶೀದಿ/ ಬಿಲ್ಲ್ ಪುಸ್ತಕದ ನಿರ್ವಣೆಯ ಬಗ್ಗೆ.
- ಔಷಧಿಗಳ ಸಂಗ್ರಹಣೆ ಮತ್ತು ವಿತರಣೆ ಬಗ್ಗೆ.

### 3.3 ಸಾಮಾನ್ಯ ಅಭಿಪ್ರಾಯ

ಅಧ್ಯಯನ ತಂಡವು ಹೆರಿಗೆ ಆಸ್ಪತ್ರೆಯಲ್ಲಿ ನೆಡೆಸಿದ ಆಯವ್ಯಯ ಮತ್ತು ಇತರ ದಾಖಲೆಗಳ ವರದಿಯಲ್ಲಿ ಕಂಡುಬಂದ ಅಂಶಗಳು ಲೆಕ್ಕಪರಿಶೋಧನೆಯ ವರದಿಗೆ ತಾಳೆ ಹೊಂದುವುದೆ ಎಂದು ತಿಳಿಯಲು ಇದನ್ನು ಪರಿಶೀಲಿಸಲಾಯಿತು. ಇದರಿಂದ

ತಿಳಿದ ಅಂಶವೆಂದರೆ ಕೆಲವೊಂದು ತಾಳೆ ಹೊಂದಿದೆ ಮತ್ತು ಕೆಲವೊಂದು ತಾಳೆ ಹೊಂದಿರುವುದಿಲ್ಲ.

ಲೆಕ್ಕಪರಿಶೋಧನೆಯ ವರದಿಯನ್ನು ಗಮನಿಸಿದಾಗ ಸಾಮಾನ್ಯವಾಗಿ ಕಂಡು ಬಂದ ಅಂಶವೆಂದರೆ, ದಾಖಲೆಗಳನ್ನು ನಿರ್ವಹಿಸುವಲ್ಲಿ ಹೆರಿಗೆ ಆಸ್ಪತ್ರೆಗಳು ಹೆಚ್ಚಿನ ಒತ್ತು ಕೊಡಬೇಕು. ಪ್ರಸ್ತುತದಲ್ಲಿ ದಾಖಲೆಗಳನ್ನು ನಿರ್ವಹಿಸುವಲ್ಲಿ ಗೊಂದಲವಿದ್ದು, ಈ ವಿಧಾನವು ಕರ್ನಾಟಕ ಪೌರ ನಿಗಮದ ನಿಯಮಕ್ಕೆ ಸರಿಹೊಂದುವುದಿಲ್ಲ. ನಮ್ಮ ಅಧ್ಯಯನದಲ್ಲಿಯೂ ಇದೇ ವಿಷಯವನ್ನು ತಿಳಿಸಲಾಗಿದೆ, ದಾಖಲೆಗಳನ್ನು ನಿರ್ವಹಿಸುವಲ್ಲಿ ಗೊಂದಲ ಮತ್ತು ಅದನ್ನು ಅರ್ಥ ಮಾಡಿಕೊಳ್ಳುವಲ್ಲಿ ತೀವ್ರ ಕ್ಲಿಷ್ಟತೆ ಇದೆ ಎಂಬುದು.

ಕಾಕ್ಸ್‌ಟೌನ್ ಹೆರಿಗೆ ಆಸ್ಪತ್ರೆಯಲ್ಲಿ ಲೆಕ್ಕಪರಿಶೋಧಕರು ತಿಳಿಸಿರುವ ಹಾಗೆ ಬಳಕೆದಾರರ ಶುಲ್ಕವನ್ನು ಕಡೆಪಕ್ಷ 2 ದಿನದೊಳಗೆ ಬ್ಯಾಂಕಿಗೆ ಸಂದಾಯ ಮಾಡಬೇಕು. ಅಧ್ಯಯನ ತಂಡದ ವತಿಯಿಂದ ಸಹ ಬಳಕೆದಾರರ ಶುಲ್ಕವನ್ನು ದಿನವಹಿ ಬ್ಯಾಂಕಿಗೆ ಜಮೆ ಮಾಡುತ್ತಿಲ್ಲ ಎಂದು ತಿಳಿದುಬಂದಿದೆ.

ಅಧ್ಯಯನದಲ್ಲಿ ಗಮನಿಸಿದ ಅಂಶವೆಂದರೆ ಕಾಕ್ಸ್‌ಟೌನ್ ಹೆರಿಗೆ ಆಸ್ಪತ್ರೆಯಲ್ಲಿ ಬಳಕೆದಾರರಿಗೆ ರಶೀಧಿಯನ್ನು ಕೊಡುವಲ್ಲಿ ಕೆಲವೊಂದು ವ್ಯತ್ಯಾಸಗಳು ಕಂಡುಬಂದಿವೆ. ಆದರೆ ಈ ವಿಷಯವನ್ನು ಲೆಕ್ಕಪರಿಶೋಧಕರು ಅವರ ವರದಿಯಲ್ಲಿ ತಿಳಿಸಿಲ್ಲ.

**ಕೋಷ್ಟಕ-1 ಲೆಕ್ಕಪರಿಶೋಧನೆಯಿಂದ ಗಮನಿಸಿದ ಅಂಶಗಳ ಸಾರಾಂಶವನ್ನು ತಿಳಿಸುತ್ತದೆ.**

| ಕ್ರಮ ಸಂಖ್ಯೆ | ಲೆಕ್ಕಪರಿಶೋಧಕರು ಗಮನಿಸಿದ ಅಂಶಗಳು | ಅಧ್ಯಯನದಿಂದ ಕಂಡು ಬಂದ ಅಂಶಗಳು. |
|---|---|---|
| 1 | ದಾಖಲೆಗಳನ್ನು ನಿರ್ವಹಿಸುವಲ್ಲಿ ಹೆಚ್ಚಿನ ಸುಧಾರಣೆಯಾಗಬೇಕು. | ದಾಖಲೆಗಳನ್ನು ನಿರ್ವಹಿಸುವಲ್ಲಿ ಹೆಚ್ಚಿನ ಸುಧಾರಣೆಯಾಗಬೇಕು |
| 2 | ಬಳಕೆದಾರರ ಶುಲ್ಕವು ಶೀಘ್ರವಾಗಿ ಸಂದಾಯವಾಗಬೇಕು | ಬಳಕೆದಾರರ ಶುಲ್ಕವು ದಿನವಹಿ ಸಂದಾಯವಾಗುತ್ತಿಲ್ಲ. |
| 3 | ಬಿಲ್ ಪುಸ್ತಕ ಅಥಾವ ರಶೀಧಿ ಪುಸ್ತಕವು ಬಳಕೆದಾರರ ಸಂದಾಯಕ್ಕೆ ತಾಳೆಹೊಂದುತ್ತದೆ. | ಬಿಲ್ ಪುಸ್ತಕ ಅಥಾವ ರಶೀಧಿ ಪುಸ್ತಕವು ರೋಗಿಗಳ ಸಂಖ್ಯೆಗೆ ತಾಳೆಹೊಂದುವುದಿಲ್ಲ. |

# 4. ಕಮ್ಯುನಿಟಿ ಸ್ಕೋರ್ ಕಾರ್ಡ್ (ಸಿಎಸ್‌ಸಿ)

ಬಿಬಿಎಂಪಿಯ ಆಯ್ದ 3 ಹೆರಿಗೆ ಆಸ್ಪತ್ರೆಗಳಾದ– ಗವಿಪುರಂ ಗುಟ್ಟ ಹಳ್ಳಿ, ಕಾಕ್ಸ್ ಟೌನ್ ಮತ್ತು ನಂದಿನಿ ಲೇ ಔಟ್ ಹೆರಿಗೆ ಆಸ್ಪತ್ರೆಗಳಲ್ಲಿ ಪಾಲುದಾರ ಎನ್.ಜಿ.ಓಗಳಾದ ಸ್ವ್ಯಾಡ್, ಅಪ್ಸ ಮತ್ತು ಸಿಫಾರ್ ಸಹಾಯದಿಂದ ಕಮ್ಯೂನಿಟಿ ಸ್ಕೋರ್ ಕಾರ್ಡ್ (ಸಿಎಸ್‌ಸಿ) ಚಟುವಟಿಕೆಯನ್ನು ಮಾಡಲಾಯಿತು. ಸಿಎಸ್‌ಸಿಯು 3 ಹಂತಗಳನ್ನು ಒಳಗೊಂಡಿದೆ. ಅವುಗಳೆಂದರೆ:

**ಹಂತ 1– ಇನ್ ಪುಟ್ ಟ್ರಾಕಿಂಗ್ ಎಕ್ಸೈಜ್**

ಮೂರು ಹೆರಿಗೆ ಆಸ್ಪತ್ರೆಗಳಲ್ಲಿ ಕಳೆದ 2 ವರ್ಷಗಳಿಂದ ಸೇವೆಯನ್ನು ಪಡೆಯುತ್ತಿರುವ ನಗರದ ಬಡ ಹೆಂಗಸರನ್ನು ಎನ್‌ಜಿಓಗಳ ಸಹಾಯದಿಂದ ಗುರುತಿಸಿ ಅವರಿಗೆ ಆಸ್ಪತ್ರೆಯ ಸೇವೆಗಳ ಮಾಹಿತಿಯನ್ನು ನೀಡಲು ಒಂದು ಕಾರ್ಯಗಾರವನ್ನು ನಡೆಸಲಾಯಿತು. ಈ ಕಾರ್ಯಗಾರದಲ್ಲಿ ಸಮುದಾಯದ ಸದಸ್ಯರಿಗೆ ಹೆರಿಗೆ ಆಸ್ಪತ್ರೆಯಲ್ಲಿ ದೊರೆಯುವ ಸೇವೆಗಳ ಬಗ್ಗೆ ಮತ್ತು ಅವರಿಗೆ ಆಸ್ಪತ್ರೆಯಲ್ಲಿ ದೊರೆಯುವ ಪ್ರಯೋಜನಗಳು ಮತ್ತು ಲಾಭಗಳ ಬಗ್ಗೆ ವಿವರಿಸಲಾಯಿತು. ಗರ್ಭಾವಸ್ಥೆಯ ಸಂದರ್ಭದಲ್ಲಿ ಉತ್ತಮ ಆರೋಗ್ಯದ ಅವಶ್ಯಕತೆಯ ಬಗ್ಗೆಯೂ ತಿಳಿಸಲಾಯಿತು. ವಿವರವಾದ ಚಾರ್ಟ್‌ಗಳ ಮೂಲಕ ಅವರಿಗೆ ಗರ್ಭಿಣಿ ಆರೈಕೆಯ ಸೇವೆಗಳಾದ– ಗರ್ಭಿಣಿ ಆರೈಕೆ, ಬಾಣಂತಿ/ಶಿಶುವಿನ ಆರೈಕೆ, ಒಳರೋಗಿಗಳ ಸೇವೆ, ಲಸಿಕೆ, ಕುಟುಂಬ ಯೋಜನೆ, ಯೋಜನೆಗಳು ಮತ್ತು ಲಾಭಗಳ ಬಗ್ಗೆ ಮಾಹಿತಿಯನ್ನು ತಿಳಿಸಲಾಯಿತು. ಇವುಗಳ ಬಗ್ಗೆ ಸರ್ಕಾರ ನೀಡಿರುವ ನಿರ್ದೇಶನ ಪತ್ರ **(Government Orders -GOs)** ಮತ್ತು ಬಿಬಿಎಂಪಿಯು ಹೊರಡಿಸಿರುವ ಸುತ್ತೋಲೆಗಳನ್ನು ಸಹ ಸಮುದಾಯದವರೊಂದಿಗೆ ಹಂಚಿಕೊಳ್ಳಲಾಯಿತು. ಹೆರಿಗೆ ಆಸ್ಪತ್ರೆಯ ಸೇವೆಯ ಗುಣಮಟ್ಟದ ಬಗ್ಗೆ ಸಮುದಾಯದವರಲ್ಲಿ ಚರ್ಚಿಸಿ ಅವರಿಂದ ಅನಿಸಿಕೆಗಳನ್ನು ಕೇಳಲಾಯಿತು ಮತ್ತು ಅದನ್ನು ವರದಿ ಮಾಡಿಕೊಳ್ಳಲಾಯಿತು.

**ಸೂಚಕಗಳ ಅಭಿವೃದ್ಧಿ**

ಹಿಂದಿನ ಅಧ್ಯಯನದ ಪ್ರಮುಖ ಚಟುವಟಿಕೆಗಳಾದ **ಸಿಟಿಜನ್ ರಿಪೋರ್ಟ್ ಕಾರ್ಡ್** ಮತ್ತು **ಆಯವ್ಯಯ ಅಧ್ಯಯನ**ಗಳಿಂದ ಕೆಲವೊಂದು ಅಂಶಗಳನ್ನು ಗುರುತಿಸಿ ಅವುಗಳನ್ನು ಸಮುದಾಯದ ಸದಸ್ಯರಲ್ಲಿ ಚರ್ಚಿಸುವುದರ ಮೂಲಕ ಸೂಚಕಗಳನ್ನು ಸಿದ್ದಪಡಿಸಿ, ಅದನ್ನು **ಕಮ್ಯೂನಿಟಿ ಸ್ಕೋರ್ ಕಾರ್ಡ್** ಚಟುವಟಿಕೆಯಲ್ಲಿ ಬಳಸಲಾಯಿತು. ಆ ಚಟುವಟಿಕೆಯಿಂದ ಕಂಡು ಬಂದ ಪ್ರಮುಖ ಅಂಶಗಳ ಆಧಾರದ ಮೇಲೆ 11 ಸೂಚಕಗಳನ್ನು ಅಭಿವೃದ್ಧಿ ಪಡಿಸಲಾಯಿತು. ಆ ಅಂಶಗಳನ್ನು ಕೆಳಗೆ ಪಟ್ಟಿ ಮಾಡಲಾಗಿದೆ.

ಈ ಸೂಚಕಗಳನ್ನು ಮೂಲವಾಗಿಟ್ಟುಕೊಂಡು ಅದರ ವಿರುದ್ಧ ಸಮುದಾಯದವರು ಮತ್ತು ಆಸ್ಪತ್ರೆಯ ಸಿಬ್ಬಂದಿಗಳು ಅಂಕಗಳನ್ನು ನೀಡಲು ತಿಳಿಸಲಾಯಿತು.

**ಕೋಷ್ಟಕ 2. ಸೂಚಕಗಳ ಪಟ್ಟಿ**

| ಕ್ರಮ. ಸಂಖ್ಯೆ | ಸೂಚಿತ ವಿಷಯಗಳು |
|---|---|
| 1 | **ವೈದ್ಯಕೀಯ ಸೌಲಭ್ಯಗಳ ಲಭ್ಯತೆ** |
| | ಸ್ಕ್ಯಾನಿಂಗ್ |
| | ಪ್ರಯೋಗಾಲಯ |
| | ಶಸ್ತ್ರ ಚಿಕಿತ್ಸೆ (ಓ. ಟಿ) |
| | ಗರ್ಭಿಣಿಗೆ ಸಂಬಂಧಿಸಿದ ಔಷಧಿಗಳು |
| | ಸಾಮಾನ್ಯ ಖಾಯಿಲೆಗೆ ಸಂಬಂದಿಸಿದ ಔಷಧಿಗಳು |
| | ಗರ್ಭಿಣಿಯ ಲಸಿಕೆಗಳು |
| | ಮಗುವಿನ ಲಸಿಕೆಗಳು |
| | ಸಿರೆಂಜುಗಳ ದಾಸ್ತನು |
| 2 | **ಸಾಮಾನ್ಯ ಸೌಲಭ್ಯಗಳು** |
| | ಶೌಚಾಲಯ ಮತ್ತು ಶೌಚಾಲಯದಲ್ಲಿ ನೀರಿನ ಸೌಕರ್ಯ |
| | ಕುಡಿಯುವ ನೀರು |
| | ಬಿಸಿ ನೀರು |
| | ಹೊದಿಕೆಗಳು |
| | ಹಾಸಿಗೆ |
| 3 | **ಮಾಹಿತಿಗಳ ಪ್ರದರ್ಶನ** |
| | ಅರಿವು ಅಥವಾ ಜಾಗೃತಿಯ ಮಾಹಿತಿಗಳು |
| | ಸಾರ್ವಜನಿಕ ದೂರುಗಳ ನಿರ್ವಹಣೆ |
| | ಸೇವೆಗಳ ಲಭ್ಯತೆ |
| 4 | **ಆವರಣದ ಸ್ವಚ್ಛತೆ** |
| | ಶೌಚಾಲಯ ಮತ್ತು ಶೌಚಾಲಯದಲ್ಲಿ ನೀರಿನ ಸೌಕರ್ಯ |
| | ಇತರೆ. ಆಸ್ಪತ್ರೆಯ ಸುತ್ತ |
| 5 | **ಸಿಬ್ಬಂದಿಯ ಲಭ್ಯತೆ** |
| | ಕೆಲಸದ ಅವಧಿಯಲ್ಲಿ |
| | ಕೆಲಸದ ಅವಧಿಯ ನಂತರ |
| 6 | **ಸಿಬ್ಬಂದಿಯ ವರ್ತನೆ** |
| | ಅಂತರಿಕವಾಗಿ |
| | ಬಳಕೆದಾರರ ಜೊತೆ |
| 7 | **ಯೋಜನೆಗಳು** |
| | ಮಡಿಲು |
| | ಜನನಿ ಸುರಕ್ಷಾಯೋಜನೆ |
| 8 | **ಆಪ್ತ ಸಮಾಲೋಚನೆ ಮತ್ತು ಸಲಹೆ** |
| | ಗರ್ಭಿಣಿ ಆರೈಕೆ |
| | ನವಜಾತ ಶಿಶುವಿನ ಆರೈಕೆ |
| | ಹೆರಿಗೆ |
| | ಮಗುವಿನ ಆರೈಕೆ |
| | ಕುಟುಂಬ ಯೋಜನೆ |
| 9 | **ಬಳಕೆದಾರರ ಶುಲ್ಕ** |
| | ರಶೀದಿ |
| | ರಶೀದಿಯನ್ನು ನೀಡುವುದು |
| | ದಾಖಲೆಗಳನ್ನು ನಿರ್ವಹಿಸುವುದು |
| | ಬಳಕೆದಾರರ ಶುಲ್ಕದ ಉಪಯೋಗ |
| 10 | **ಒಳರೋಗಿಗಳ ಆಹಾರ** |
| | ಹಾಲು |
| | ಇತರೆ ಆಹಾರದ ಪದಾರ್ಥಗಳು |
| 11 | **ಆಯವ್ಯಯ ತಯಾರಿಸುವ ಸಾಮಾರ್ಥ್ಯ** |
| 12 | **ದಾಖಲೆಗಳನ್ನು ನಿರ್ವಹಿಸುವ ಸಾಮಾರ್ಥ್ಯ** |

## ಹಂತ-2 ಸ್ವಮೌಲ್ಯಮಾಪನ ಮತ್ತು ಅದರ ಅಂಕಗಳು

ಈ ಚಟುವಟಿಕೆಯು ಅಧ್ಯಯನದ ಒಂದು ಪ್ರಮುಖ ಹಂತವಾಗಿದ್ದು, ಈ ಚಟುವಟಿಕೆಯಲ್ಲಿ ಸಂಬಂದಪಟ್ಟ ಹೆರಿಗೆ ಆಸ್ಪತ್ರೆಯ ಬಳಕೆದಾರರಿಗೆ ಹೆರಿಗೆ ಆಸ್ಪತ್ರೆಯಲ್ಲಿ ಸಿಗುವ ಸೇವಾಸೌಲಭ್ಯಗಳ ಬಗ್ಗೆ ವಿವರಿಸಲಾಯಿತು. ನಂತರ ಅವರಿಗೆ ಹೆರಿಗೆ ಆಸ್ಪತ್ರೆಯಲ್ಲಿ ಪಡೆದ ಸೇವೆಗಳ ಸೂಚಕಗಳ ವಿರುದ್ಧ ಅಂಕಗಳನ್ನು ಸೂಚಿಸಲು ತಿಳಿಸಲಾಯಿತು (1 ಕಡಿಮೆ ಮತ್ತು 5 ಹೆಚ್ಚು). ಹಾಗೂ ಅವರು ನೀಡಿದ ಅಂಕಗಳಿಗೆ ಕಾರಣಗಳನ್ನು ಕೇಳಲಾಯಿತು.

**ಕೋಷ್ಟಕ 3: ಹೆರಿಗೆ ಆಸ್ಪತ್ರೆಗಳ ಸ್ಕೋರ್ ಕಾರ್ಡ್**

| ಕ್ರಮ. ಸಂಖ್ಯೆ | ಸೂಚಿತ ವಿಷಯಗಳು | ಗವಿಮರಂ ಗುಟ್ಟಹಳ್ಳಿ ಹೆರಿಗೆ ಆಸ್ಪತ್ರೆ | | ಕಾಕ್ಸ್ ಟೌನ್ ಹೆರಿಗೆ ಆಸ್ಪತ್ರೆ | | ನಂದಿನಿ ಲೇ ಔಟ್ ಹೆರಿಗೆ ಆಸ್ಪತ್ರೆ | |
|---|---|---|---|---|---|---|---|
| | | ಸಿಬ್ಬಂದಿ ಸೂಚಿಸಿರುವ ಅಂಕ | ಸಮುದಾಯದ ಸದಸ್ಯರು ನೀಡಿರುವ ಅಂಕ | ಸಿಬ್ಬಂದಿ ಸೂಚಿಸಿರುವ ಅಂಕ | ಸಮುದಾಯದ ಸದಸ್ಯರು ನೀಡಿರುವ ಅಂಕ | ಸಿಬ್ಬಂದಿ ಸೂಚಿಸಿರುವ ಅಂಕ | ಸಮುದಾಯದ ಸದಸ್ಯರು ನೀಡಿರುವ ಅಂಕ |
| 1 | ವೈದ್ಯಕೀಯ ಸೌಲಭ್ಯಗಳು | 4 | 4 | 5 | 4 | 4 | 3 |
| 2 | ಇತರೆ ಸೌಲಭ್ಯಗಳು | 5 | 4 | 5 | 4 | 3 | 5 |
| 3 | ಹೆರಿಗೆ ಸೌಲಭ್ಯ | 5 | 3 | 5 | 5 | 0 | 1 |
| 4 | ಔಷಧಿಗಳ ಲಭ್ಯತೆ ಮತ್ತು ವಿತರಣೆ | 4 | 0 | 5 | 5 | 5 | 5 |
| 5 | ಒಳರೋಗಿಗಳಿಗೆ ಆಹಾರ | 5 | 2 | 4 | 4 | NA | NA |
| 6 | ಕುಟುಂಬ ಯೋಜನೆಯ ಸೇವೆ | 4 | 3 | 5 | 3 | 4 | 5 |
| 7 | ಮಡಿಲು ಯೋಜನೆ | 5 | 2 | 4.5 | 1 | NA | NA |
| 8 | ಜನನಿ ಸುರಕ್ಷಾಯೋಜನೆ | 5 | 0 | 5 | 1 | NA | NA |
| 9 | ಬಳಕೆದಾರರೊಂದಿಗೆ ವೈದ್ಯರ ನಡವಳಿಕೆ | 4 | 0 | 4 | 1 | 4 | 5 |
| 10 | ಬಳಕೆದಾರರೊಂದಿಗೆ ಇತರೆ ಸಿಬ್ಬಂದಿಯ ನಡವಳಿಕೆ | 5 | 4 | 5 | 1 | 5 | 0 |
| 11 | ಬಳಕೆದಾರರ ಶುಲ್ಕದ ವಸೂಲಾತಿ ಮತ್ತು ರಶೀದಿ ವಿತರಣೆ | 5 | 0 | 5 | 1 | 5 | 0 |

NA – ಅನ್ವಯಿಸುವುದಿಲ್ಲ.

1 ಕಡಿಮೆ ಮತ್ತು 5 ಹೆಚ್ಚು.

ಇದೇ ವಿಧಾನವನ್ನು ಸೇವೆಯನ್ನು ಒದಗಿಸುವ ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳ ಜೊತೆ ಸಹ ಮಾಡಲಾಯಿತು. ಅವರುಗಳು ಸಹ ತಾವು ನೀಡಿದ ಸೇವೆಯ ಬಗ್ಗೆ ಸ್ವಯಂ ಮೌಲ್ಯಮಾಪನ ಮಾಡಿಕೊಳ್ಳುವ ಮೂಲಕ ಸೂಚಕಗಳಿಗೆ ಅಂಕಗಳನ್ನು ನೀಡಿ ಕಾರಣವನ್ನು ತಿಳಿಸಿದರು. 3 ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳು ಹಾಗೂ ಬಳಕೆದಾರರು ನೀಡಿದ ಅಂಕಗಳ ಕ್ರೂಢೀಕರಣದ ವಿವರವನ್ನು ಕೋಷ್ಟಕ 3ರಲ್ಲಿ ತಿಳಿಸಲಾಗಿದೆ.

### ಹಂತ-3 ಮುಖಾಮುಖಿ ಚರ್ಚೆ

ಉಪಸಂಹಾರದ ಹಂತವಾಗಿ ಬಳಕೆದಾರರು ಹಾಗೂ ಸೇವೆಯನ್ನು ಒದಗಿಸುವವರಿಗೆ ಎನ್.ಜಿ.ಓ ಸಹಾಯದಿಂದ ಒಂದು ವೇದಿಕೆಯನ್ನು ಸೃಷ್ಟಿಸುವ ಮೂಲಕ 'ಮುಖಾಮುಖಿ ಸಭೆ'ಯನ್ನು ಆಯಾ ಹೆರಿಗೆ ಆಸ್ಪತ್ರೆಗಳಲ್ಲಿ ಏರ್ಪಡಿಸಲಾಯಿತು. ಈ ಸಭೆಯ ಮುಖ್ಯ ಉದ್ದೇಶವೆಂದರೆ ಬಳಕೆದಾರರು ಮತ್ತು ಸೇವೆಯನ್ನು ಒದಗಿಸುವವರ ನಡುವೆ ಒಂದು ನಿರ್ದಿಷ್ಟವಾದ ನಿರ್ಧಾರವನ್ನು ತೆಗೆದುಕೊಳ್ಳುವ ವೇದಿಕೆಗೆ ಅವಕಾಶ ನೀಡುವುದು, ಜಂಟಿ ನಿರ್ಧಾರಕ್ಕೆ ಅವಕಾಶ, ಸೇವೆಗಳ ಸುಧಾರಣೆಗಾಗಿ, ಸೇವೆಯನ್ನು ಒದಗಿಸುವವರಿಗೆ ತಕ್ಷಣದ ಸಲಹೆ ನೀಡುವುದು, ಆಸ್ಪತ್ರೆಯು ಪರಿಣಾಮಕಾರಿಯಾದ ಗುಣಮಟ್ಟದ ಸೇವೆಯನ್ನು ನೀಡುವ ಕಡೆಗೆ ಉತ್ತೇಜನ ನೀಡುವುದು.

ಈ 'ಮುಖಾಮುಖಿ ಸಭೆ'ಯಲ್ಲಿ ಬಿ.ಬಿ.ಎಂ.ಪಿಯ ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳು, ಆರೋಗ್ಯವಿಭಾಗದ ಅಧಿಕಾರಿಗಳು ಮತ್ತು ಬಳಕೆದಾರರು ಚರ್ಚೆಯಲ್ಲಿ ಪಾಲ್ಗೊಂಡು ಕೆಲವೊಂದು ಕ್ರಿಯಾಯೋಜನೆಯನ್ನು ಅನುಸರಿಸುವ ಮೂಲಕ ಹೆರಿಗೆ ಆಸ್ಪತ್ರೆ ಸೇವೆಗಳ ಗುಣಮಟ್ಟವನ್ನು ಹೆಚ್ಚಿಸುವ ತೀರ್ಮಾನಕ್ಕೆ ಬಂದರು. ಆ ಕ್ರಿಯಾಯೋಜನೆಯ ಮುಖ್ಯಾಂಶಗಳು ಈ ಕೆಳಗಿನಂತಿವೆ:

- ಸ್ಕ್ಯಾನಿಂಗ್ ವ್ಯವಸ್ಥೆಯನ್ನು ಒದಗಿಸಬೇಕು
- ಒಳರೋಗಿಗಳಿಗೆ ನೀಡುವ ಹಾಲಿನ ಪೂರೈಕೆಯ ವಿಧಾನವನ್ನು ಪುನರ್ ಪರಿಷ್ಕರಿಸಬೇಕು.
- ಜೆ.ಎಸ್.ವೈ ಫಲಾನುಭವಿಗಳ ಪಟ್ಟಿ ಮತ್ತು ಮಡಿಲು ಕಿಟ್‌ನ ದಾಸ್ತಾನಿನ ವಿವರವನ್ನು ಹೆರಿಗೆ ಆಸ್ಪತ್ರೆಯಲ್ಲಿ ಪ್ರದರ್ಶಿಸಬೇಕು
- ಬಳಕೆದಾರರ ಶುಲ್ಕ ಮತ್ತು ಸಾರ್ವಜನಿಕ ದೂರು ನಿರ್ವಹಣೆಯ ಚಾರ್ಟ್‌ಗಳನ್ನು ಪ್ರಕಟಿಸುವುದು. (ಎಲ್ಲಾ ಹೆರಿಗೆ ಆಸ್ಪತ್ರೆಗಳಲ್ಲಿ)

- ಎಲ್ಲಾ ರೋಗಿಗಳಿಗೂ ಶುದ್ಧವಾದ ಕುಡಿಯುವ ನೀರು ಮತ್ತು ಬಿಸಿನೀರಿನ್ನು ಒದಗಿಸುವುದು.
- **'ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿ'**ಯನ್ನು ರಚನೆ ಮಾಡುವ ಮೂಲಕ ಹೆರಿಗೆ ಆಸ್ಪತ್ರೆಯು ನೀಡುವ ಸೇವೆಗಳ ಗುಣಮಟ್ಟವನ್ನು ಮೇಲ್ವಿಚಾರಣೆ ಮಾಡಿ ಸಮುದಾಯದಲ್ಲಿ ಇದರ ಬಗ್ಗೆ ಅರಿವು ಮೂಡಿಸುವುದು.

# 5. ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿ

ಈ ಹೆರಿಗೆ ಆಸ್ಪತ್ರೆಗಳ ವ್ಯಾಪ್ತಿಯ ಪ್ರದೇಶದಲ್ಲಿ ಸ್ಥಳೀಯವಾಗಿ ಕ್ರೀಯಾಶೀಲರಾಗಿರುವ ಅಂದರೆ ಉತ್ತಮ ಸೇವೆಗಾಗಿ ವಕಾಲತ್ತನ್ನು ವಹಿಸುವಂತಹ ಆಸ್ಪತ್ರೆಯ ಬಳಕೆದಾರರನ್ನು ಎನ್‌ಜಿಓಗಳ ಸಹಾಯದಿಂದ ಗುರುತಿಸಿ ಆಯ್ದ 3 ಹೆರಿಗೆ ಆಸ್ಪತ್ರೆಗಳಲ್ಲಿ 'ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿ'ಯನ್ನು ರಚಿಸಲಾಯಿತು. ಈ ಸಮಿತಿಯಲ್ಲಿ 8-10 ಜನ ಸದಸ್ಯರಿದ್ದು ಇವರನ್ನು ಹೆರಿಗೆ ಆಸ್ಪತ್ರೆಯ ವ್ಯಾಪ್ತಿಯಲ್ಲಿ ಬರುವ ಸ್ಥಳದಿಂದ ಆರಿಸಲಾಗಿದೆ, ಇವರುಗಳು ಹೆರಿಗೆ ಆಸ್ಪತ್ರೆಯ ಸೇವೆಗಳನ್ನು ಹಿಂದೆ ಹಾಗೂ ಪ್ರಸ್ತುತದಲ್ಲಿಯೂ ಸಹ ಉಪಯೋಗಿಸುವವರಾಗಿರುತ್ತಾರೆ.

ಹೆರಿಗೆ ಆಸ್ಪತ್ರೆಯ ಸೇವೆಯ ಗುಣಮಟ್ಟವನ್ನು ಉತ್ತಮಗೊಳಿಸಲು ಆಸ್ಪತ್ರೆಯ ಸಿಬ್ಬಂದಿಗಳು ಹಾಗೂ ಸಮಿತಿಯ ಸದಸ್ಯರು ಒಟ್ಟಿಗೆ ಸೇರಿ ಕೆಲಸ ಮಾಡುವುದಾಗಿ ಒಪ್ಪಿಕೊಂಡು, ಜಂಟಿ ಕ್ರಿಯಾ ಯೋಜನೆಯ ಕರಡನ್ನು ಮಾಡುವ ಮೂಲಕ ಹೆರಿಗೆ ಆಸ್ಪತ್ರೆಯ ಸೇವೆಯನ್ನು ಉತ್ತಮಗೊಳಿಸುವುದುದಾಗಿ ತೀರ್ಮಾನಿಸಲಾಯಿತು. ಈ ಸಮಿತಿಯ ಸದಸ್ಯರು ನಿರಂತರವಾಗಿ ಆಸ್ಪತ್ರೆಯ ಸೇವೆಗಳನ್ನು ಮೇಲ್ವಿಚಾರಣೆ ಮಾಡುವುದನ್ನು ಕ್ರಿಯಾಯೋಜನೆಯು ಒಳಗೊಂಡಿತ್ತು ಮತ್ತು ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳೊಂದಿಗೆ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ತಾವು ಗಮನಿಸಿದ ವಿಷಯಗಳನ್ನು ನಿರಂತರವಾಗಿ ಹಂಚಿಕೊಳ್ಳುವುದು.

ಇದಕ್ಕೆ ಸಹಾಯವಾಗುವಂತೆ ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರಿಗೆ ಪರಿಶೀಲನಾ ಪಟ್ಟಿಯನ್ನು ಸ್ಥಳೀಯ ಭಾಷೆಯಲ್ಲಿ ನೀಡಲಾಯಿತು. ಚೆಕ್ ಲಿಸ್ಟ್ ಪ್ರಕಾರ ಸಮಿತಿಯ ವಿವಿದ ಸದಸ್ಯರು ಆಸ್ಪತ್ರೆಗೆ 15ದಿನಗಳಿಗೆ ಒಂದು ಸಾರಿ ಆಸ್ಪತ್ರೆಯನ್ನು ಭೇಟಿ ನೀಡುವ ಮೂಲಕ ಆಸ್ಪತ್ರೆಯ ಪ್ರಗತಿಯ ಮೇಲ್ವಿಚಾರಣೆ ನಡೆಸಲು ತಿಳಿಸಲಾಯಿತು. ಹಾಗೂ 15 ದಿನಗಳಿಗೊಮ್ಮೆ ಸಮಿತಿಯ ಸದಸ್ಯರು ತಾವು ಗಮನಿಸಿದ ಅಂಶಗಳನ್ನು ಕಾರ್ಯರೂಪಕ್ಕೆ ತರಲು ಸಭೆಯನ್ನು ಸಮುದಾಯದ ಸ್ಥಳದಲ್ಲಿ ನಡೆಸಲು ತೀರ್ಮಾನಿಸಲಾಯಿತು. ಸಮಿತಿಯ ಸದಸ್ಯರಿಗೆ ಹೆರಿಗೆ ಆಸ್ಪತ್ರೆಯು ಒದಗಿಸುತ್ತಿರುವ ಸೇವೆಗಳನ್ನು ಕ್ರಮಬದ್ಧವಾಗಿ ಮೇಲ್ವಿಚಾರಣೆ ಮಾಡಲು ಅವರಿಗೆ ಒಂದು ವಿವರವಾದ **(checklist)** ಪರಿಶೀಲನಾ ಪಟ್ಟಿಯನ್ನು (ಅನುಬಂಧ-1) ಸಿದ್ಧಪಡಿಸಿ ನೀಡಲಾಗಿದೆ. ಸಮಿತಿಯ ಸದಸ್ಯರ ಪಾತ್ರ ಮತ್ತು ಜವಾಬ್ದಾರಿಯನ್ನು (ಅನುಬಂಧ-2) ತಿಳಿಸುವ ಒಂದು ಸ್ಪಷ್ಟವಾದ ಚಾರ್ಟ್‌ನ್ನು ಸಿದ್ಧಪಡಿಸಿ ಅವರಿಗೆ ಗೊತ್ತುಪಡಿಸಲಾಗಿದೆ. ಹಾಗೂ ಸಮಿತಿಯ ಸದಸ್ಯರು ಹೆರಿಗೆ ಆಸ್ಪತ್ರೆಯನ್ನು ನಿರಂತರವಾಗಿ ಭೇಟಿನೀಡುವುದು. ಅಂತರಿಕವಾಗಿ ಚರ್ಚಿಸುವುದು. ಮಾಹಿತಿಗಳನ್ನು ಹಂಚಿಕೊಳ್ಳುವುದರ ಜೊತೆಗೆ 3

ತಿಂಗಳಿಗೊಮ್ಮೆ ಆಸ್ಪತ್ರೆಯ ಸಿಬ್ಬಂದಿಗಳ ಜೊತೆ ಸಭೆ ಸೇರುವ ಮೂಲಕ ಕ್ರಿಯಾ ಯೋಜನೆಯನ್ನು ಜಾರಿಗೆ ತರುವು ನಿಟ್ಟಿನಲ್ಲಿ ಕಾರ್ಯನಿರ್ವಹಿಸಲಾಗುತ್ತಿದೆ. (ಇಲ್ಲಿಯವರೆಗೂ ಪ್ರತಿಯೊಂದು ಹೆರಿಗೆ ಆಸ್ಪತ್ರೆಯಲ್ಲಿ ಎರಡು ಸಭೆಗಳನ್ನು ಕೈಗೊಂಡಿದೆ)

ಇದರ ಜೊತೆಗೆ ಸಮಿತಿಯ ಸದಸ್ಯರು ಬಳಕೆದಾರರ ಜೊತೆ ಸಣ್ಣ ಸಭೆಗಳನ್ನು ನಡೆಸುವ ಮೂಲಕ ಹೆರಿಗೆ ಆಸ್ಪತ್ರೆಯಲ್ಲಿ ದೊರೆಯುವ ಸೇವಾ ಸೌಲಭ್ಯಗಳ ಬಗ್ಗೆ ಅರಿವನ್ನು ನೀಡುವುದು ಹಾಗೂ ಬಿಬಿಎಂಪಿಯು ತಮ್ಮ ಏರಿಯಾಗಳಲ್ಲಿ ನಡೆಸುವ ಅರಿವು ಕಾರ್ಯಕ್ರಮ, ಆರೋಗ್ಯ ಶಿಬಿರ ಇತ್ಯಾದಿ ಕಾರ್ಯಕ್ರಮಗಳ ಬಗ್ಗೆ ಜನರಿಗೆ ತಿಳಿಸುವುದು ಹಾಗೂ ಬಳಕೆದಾರರು ಇದರಲ್ಲಿ ಭಾಗವಹಿಸುವ ಹಾಗೆ ಮಾಡುವುದು ಇವರ ಇನ್ನೊಂದು ಪ್ರಮುಖ ಕಾರ್ಯವಾಗಿದೆ.

## 5.1 ಈ ಅಧ್ಯಯನದಿಂದ ಕಂಡುಬಂದ ಕೆಲವು ಅಂಶಗಳ ಅನುಸರಣೆ ಮತ್ತು ಸಲಹೆಗಳು

### 5.1.1. ಸಮುದಾಯದ ಗುಂಪುಗಳು ಸ್ಥಳೀಯ ಸರ್ಕಾರದ ಹಣಕಾಸು ಮತ್ತು ಸಾರ್ವಜನಿಕ ಸೇವೆಗಳಲ್ಲಿ ತೊಡಗಿಸಿಕೊಳ್ಳುವ ಮೂಲಕ ಆರೋಗ್ಯ ಸೇವೆಗೆ ಸಂಬಂದಿತ ಸಮಸ್ಯೆಗಳ ಬಗ್ಗೆ ಕೆಲಸ ಮಾಡುವುದು

ಮೂರು ಹೆರಿಗೆ ಆಸ್ಪತ್ರೆಗಳಲ್ಲಿ ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯನ್ನು ರಚನೆ ಮಾಡಿದ್ದು, ಸಮಿತಿಯ ಸದಸ್ಯರು ಹೆರಿಗೆ ಆಸ್ಪತ್ರೆಯ ಸೇವೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವ ಮೂಲಕ ಆಸ್ಪತ್ರೆಯ ಗುಣಮಟ್ಟವನ್ನು ಉತ್ತಮಗೊಳಿಸಲು, ಆಡಳಿತತ್ಮಾಕ ಸುಧಾರಣೆಯನ್ನು ತರಲು ಒಂದು ಉತ್ತಮ ವೇದಿಕೆಯನ್ನು ಸೃಷ್ಟಿಸಿತು. ಸಮಿತಿಯ ಸದಸ್ಯರು ಆಸ್ಪತ್ರೆಯನ್ನು 10 ದಿನಗಳಿಗೊಮ್ಮೆ ಭೇಟಿ ನೀಡುವುದು ಹಾಗೂ ಪಿಎಸಿ ಮತ್ತು ಅದರ ಪಾಲುದಾರ ಎನ್‌ಜಿಓಗಳ ಉಪಸ್ಥಿತಿಯಲ್ಲಿ ಹೆರಿಗೆ ಆಸ್ಪತ್ರೆಯ ಸಿಬ್ಬಂದಿಗಳ ಜೊತೆ ಸಭೆಯನ್ನು ನಡೆಸುತ್ತಿರುವುದು. ಸದಸ್ಯರು ತಾವು ಹೆರಿಗೆ ಆಸ್ಪತ್ರೆಯಲ್ಲಿ ಗಮನಿಸಿದ ಅಂಶಗಳನ್ನು ಒಳಗೊಂಡ ಒಂದು ವರದಿಯನ್ನು ಮಂಡಿಸುವುದು ಮತ್ತು ಇದರ ಬಗ್ಗೆ ಸಿಬ್ಬಂದಿಗಳ ಪ್ರತಿಕ್ರಿಯೆಯನ್ನು ಪಡೆಯುವುದು. ಇಲ್ಲಿ ಕಂಡುಬಂದ (ಕ್ರಿಯಾ ಅಂಶಗಳನ್ನು) ಅಂಶಗಳನ್ನು ಮುಂದಿನ ಸಭೆಯಲ್ಲಿ ಅಂದರೆ 'ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರು ಮತ್ತು ಆಸ್ಪತ್ರೆಯ ಸಿಬ್ಬಂದಿಗಳ ನಡುವೆ ನಡೆಯುವ ಸಭೆಯಲ್ಲಿ' ಚರ್ಚಿಸುವುದು.

ಈ ನಿಟ್ಟಿನಲ್ಲಿ ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರ ತಮ್ಮ 4 ತಿಂಗಳ ನಿರಂತರ ಆಸ್ಪತ್ರೆಯ ಭೇಟಿಯಿಂದ ಹೆರಿಗೆ ಆಸ್ಪತ್ರೆಗಳ ಕಾರ್ಯಗಳಲ್ಲಿ

ಕೆಲವೊಂದು ಬದಲಾವಣೆಗಳನ್ನು ತರಲು ಕೆಲವೊಂದು ಕೊಡುಗೆಗಳನ್ನು ನೀಡಿದ್ದಾರೆ. ಉದಾ: ನಂದಿನಿ ಲೇ ಔಟ್ ಹೆರಿಗೆ ಆಸ್ಪತ್ರೆಯಲ್ಲಿ ಬಳಕೆದಾರರಿಗೆ ಕುಡಿಯುವ ನೀರಿನ ಲಭ್ಯತೆ. (ಈ ಹಿಂದೆ ಹೊರರೋಗಿಗಳಿಗೆ ಈ ವ್ಯವಸ್ಥೆ ಇರಲಿಲ್ಲ.) ಆಯ್ದ ಮೂರು ಹೆರಿಗೆ ಆಸ್ಪತ್ರೆಗಳಲ್ಲಿ ಬಳಕೆದಾರರ ಶುಲ್ಕದ ಚಾರ್ಟ್, ದೂರುನಿರ್ವಹಣಾ ಚಾರ್ಟ್ ಮತ್ತು ಅರಿವು ಮೂಡಿಸುವ ಚಾರ್ಟ್‌ಗಳ ಪ್ರದರ್ಶನವನ್ನು ಮಾಡಿರುವುದು. ತುಂಬಾ ಗಮನಾರ್ಹ ಅಂಶವೆಂದರೆ ಬಳಕೆದಾರರ ಶುಲ್ಕದ ವಸೂಲಿಯಲ್ಲಿ ನಡೆಯುತ್ತಿದ್ದ ಭ್ರಷ್ಟಾಚಾರದ ಬದಲಾವಣೆ- ನಂದಿನಿ ಲೇ ಔಟ್ ಹೆರಿಗೆ ಆಸ್ಪತ್ರೆಯಲ್ಲಿ ಪ್ರಸ್ತುತದಲ್ಲಿ ವಸೂಲಿ ಮಾಡಿದ ಬಳಕೆದಾರರ ಶುಲ್ಕಕ್ಕೆ ಸರಿಯಾದ ರಶೀದಿಯನ್ನು ನೀಡುತ್ತಿರುತ್ತಾರೆ, ಆದರೆ ಈ ಮೊದಲು ಹೀಗೆ ನಡೆಯುತ್ತಿರಲಿಲ್ಲ.

**5.1.2 ಸಮುದಾಯವನ್ನು ಉತ್ತೇಜಿಸುವುದು, ಅವರನ್ನು ಒಟ್ಟುಗೂಡಿಸುವುದು ಮತ್ತು ಅವರಿಗೆ ಮಾಹಿತಿಯನ್ನು ನೀಡುವ ಮೂಲಕ ಸರ್ಕಾರವನ್ನು ಸಾರ್ವಜನಿಕ ಸೇವೆಗೆ ಜವಾಬ್ದಾರಿಯಾಗುವಂತೆ ಮಾಡುವುದು**

ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರು ಹೆರಿಗೆ ಆಸ್ಪತ್ರೆಯ ವ್ಯಾಪ್ತಿಯಲ್ಲಿ ಬರುವ ಬಳಕೆದಾರರೊಂದಿಗೆ ನಿರಂತರವಾಗಿ ನಡೆಸುವ ಮಾತುಕತೆಗಳಲ್ಲಿ ತಾಯಿಯ ಆರೋಗ್ಯ ಮತ್ತು ಆಸ್ಪತ್ರೆಯಲ್ಲಿ ಅವರಿಗೆ ಸಿಗುವ ಸೌಲಭ್ಯಗಳ ಬಗ್ಗೆ ಅರಿವನ್ನು ಮೂಡಿಸುತ್ತಾರೆ. ಹಾಗೆಯೇ ಹೆರಿಗೆ ಆಸ್ಪತ್ರೆಯ ಪಾರದರ್ಶಕತೆ ಮತ್ತು ಹೊಣೆಗಾರಿಕೆಯನ್ನು ನೋಡಲು ಮುಂದೆಬರುವ ಸಮುದಾಯದ ಗುಂಪುಗಳಿಗೆ ಅರಿವನ್ನು ನೀಡುವ ಮೂಲಕ ಜಾಗೃತರಾಗುವಂತೆ ಮಾಡುತ್ತಾರೆ. ಪಿಎಸಿಯು ನಿರಂತರವಾಗಿ ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರ ಜೊತೆ ನಡೆಸಿದ ಸಭೆಗಳಲ್ಲಿ ಮತ್ತು ಪಾಲುದಾರ ಎನ್‌ಜಿಓ ಗಳು ನಡೆಸಿದ ಕೇಸ್ ಸ್ಟಡಿಗಳಲ್ಲಿ ರೋಗಿಗಳು ತಿಳಿಸಿರುವಂತೆ, ಅವರು ನಿಗದಿತ ಬಳಕೆದಾರ ಶುಲ್ಕವನ್ನು ಮಾತ್ರ ಪಾವತಿ ಮಾಡಿರುತ್ತಾರೆ, ಹೆಚ್ಚಿಗೆ ಹಣವನ್ನು ನೀಡಿರುವುದಿಲ್ಲ. ಒಂದು ಆಸಕ್ತಿಕರ ಅಂಶವೆಂದರೆ ಗರ್ಭಿಣಿಯ ಸಂಬಂಧಿಯು ಗರ್ಭಿಣಿ ಮಹಿಳೆಗೆ ಹೆರಿಗೆ ನೋವು ಬಂದಾಗ ಅವರನ್ನು ಬೇರೆ ಆಸ್ಪತ್ರೆಗೆ ಕರೆದುಕೊಂಡು ಹೋಗಲು ಆಸ್ಪತ್ರೆಯಲ್ಲಿ ಆಂಬ್ಯುಲೆನ್ಸ್‌ನ್ನು ಕೇಳಿದ್ದು ಅವರು ಅದರ ಸೇವೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಸಮಿತಿಯ ಸದಸ್ಯರು ಇರುವ ಒಂದು ಹೆರಿಗೆ ಆಸ್ಪತ್ರೆಯಲ್ಲಿ, ಅಲ್ಲಿಯ ನರ್ಸ್ ಬಳಕೆದಾರರಿಂದ ಹೆರಿಗೆ ಶುಲ್ಕದ 5 ಪಟ್ಟಷ್ಟು ಹಣವನ್ನು ತೆಗೆದುಕೊಂಡಿದ್ದು, ಅದಕ್ಕೆ ಯಾವುದೇ ವಿಧವಾದ ರಶೀಧಿಯನ್ನು ನೀಡಲಿಲ್ಲವೆಂದು – ಆಸ್ಪತ್ರೆಯ ಸಿಬ್ಬಂದಿ ಮತ್ತು ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಭೆಯಲ್ಲಿ ತಿಳಿಸಿದರು. ಈ ಸಭೆಯಲ್ಲಿ ವೈದ್ಯರು ಆ ನರ್ಸ್‌ಗೆ ಛಿಮಾರಿ

ಹಾಕಿ ಮುಂದೆ ಹೀಗೆ ಮಾಡಬಾರದೆಂದು ಎಚ್ಚರಿಕೆ ನೀಡಿದರು ಮತ್ತು ಇನ್ನು ಮುಂದೆ ಹೀಗೆ ಮಾಡಿದರೆ ಕಠಿಣ ಕ್ರಮ ತೆಗೆದುಕೊಳ್ಳುವುದಾಗಿ ತಿಳಿಸಿದರು.

**5.1.3. ಸರ್ಕಾರಿ ಸಂಸ್ಥೆಗಳು ಹಾಗೂ ನಾಗರಿಕ ಸಮಾಜದ ಸಂಘಟನೆಗಳ ನಡುವಿನ ಸಹಕಾರಿ ಸಹಭಾಗಿತ್ವದಲ್ಲಿ ರಾಜ್ಯ/ಸರ್ಕಾರದ ಆರ್ಥಿಕ ಹಂಚಿಕೆ, ಖರ್ಚು ಮತ್ತು ಲೆಕ್ಕಗಳನ್ನು ಸುಧಾರಿಸುವ ನಿಟ್ಟಿನಲ್ಲಿ ನಾಗರಿಕರಿಗೆ ಅನುಕೂಲವಾಗುವ ಹಾಗೆ ಮಾಡುವುದು.**

ಬಿಬಿಎಂಪಿಯ ಆರೋಗ್ಯ ವಿಭಾಗದ ಆಯವ್ಯಯದ ರಚನೆ ಮತ್ತು ಅದರ ಅನುಸರಣೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಪಿಎಸಿ ತಂಡಕ್ಕೆ ತನ್ನ ಪ್ರಾಜೆಕ್ಟ ಸಮಯದ ಮೂರು ಭಾಗದಷ್ಟು ಸಮಯಬೇಕಾಯಿತು, ಆದ್ದರಿಂದ ಈ ಪ್ರಕ್ರಿಯೆಯನ್ನು ಮುಗಿಸಲು ಸಾಧ್ಯವಾಗಲಿಲ್ಲ. ಈ ನಿಟ್ಟಿನಲ್ಲಿ ಪಿಎಸಿ ಮತ್ತು ಅದರ ಸಹಭಾಗಿ ಎನ್ ಜಿಓಗಳು ಅದರ ಸಾಮಾರ್ಥ್ಯವನ್ನು ತಿಳಿಯಲು ಮತ್ತು ಆಯವ್ಯಯ ವಿಶ್ಲೇಷಣೆಯನ್ನು ನಡೆಸಲು ಸಹಾಯವಾಗುವಂತ ಒಂದು ಕಾರ್ಯಗಾರವನ್ನು ಮಾಡಿದರೆ, ಪ್ರತಿಯೊಬ್ಬರು ಆಯವ್ಯಯದ ವಿಶ್ಲೇಷಣೆ ಮತ್ತು ಆಯವ್ಯಯದ ಪ್ರಕ್ರಿಯೆಯನ್ನು ತಿಳಿಯಬಹುದು. ಇದರಿಂದ ಒಂದು ಪರಿಣಾಮಕಾರಿಯಾದ ಆಯವ್ಯಯದ ಚಟುವಟಿಕೆಯನ್ನು ಸುಧಾರಿಸುವ ವಕಾಲತ್ತನ್ನು ವಹಿಸಬಹುದು ಎಂದು ತಿಳಿದುಕೊಂಡಿದೆ.

## 5.2 ಮುಂದಿನ ಹೆಜ್ಜೆ

ಎರಡು ಧೀರ್ಘಕಾಲಿನ ಗುರಿಗಳನ್ನು ಇಟ್ಟುಕೊಂಡು ಈ ಪ್ರಸ್ತುತ ಯೋಜನೆಯನ್ನು ಆರಂಭಿಸಲಾಗಿದೆ. ಮೊದಲನೆಯದಾಗಿ, ಹೆರಿಗೆ ಆಸ್ಪತ್ರೆಗಳಲ್ಲಿನ ಸೇವೆಗಳ ಅಭಿವೃದ್ಧಿಯ ಮೇಲ್ವಿಚಾರಣೆ ನಡೆಸಲು ಸಮುದಾಯವನ್ನು ತೊಡಗಿಸುವುದು. ಎರಡನೆಯದಾಗಿ ಬೆಂಗಳೂರು ನಗರದ ಬಡಮಹಿಳೆಯರಿಗೆ ಉತ್ತಮ ಸೇವೆಗಳ ಒದಗಿಸುವಿಕೆಯನ್ನು ಸಾಧ್ಯವಾಗಿಸುವುದಕ್ಕಾಗಿ ಆಯವ್ಯಯದ ಸಿದ್ಧತೆ ಮತ್ತು ವೆಚ್ಚಗಳಲ್ಲಿ ಪಾರದರ್ಶಕತೆ ಮತ್ತು ಹೊಣೆಗಾರಿಕೆಯನ್ನು ತರುವುದರಲ್ಲಿ ಸಮುದಾಯವನ್ನು ತೊಡಗಿಸುವುದು.

**ಈ ಕೆಳಕಂಡ ವಿಷಯಗಳಲ್ಲಿ ನಮ್ಮ ಕೆಲಸಗಳನ್ನು ಇನ್ನಷ್ಟು ವಿಸ್ತಾರಗೊಳಿಸಲು ಸಾಧ್ಯವಿದೆ**

**ಹೆರಿಗೆ ಆಸ್ಪತ್ರೆ ಆಯವ್ಯಯ ಮಾಹಿತಿಯನ್ನು ಉತ್ತಮಪಡಿಸುವುದಕ್ಕಾಗಿ ವಕಾಲತ್ತು ವಹಿಸುವುದು**

ಪ್ರಸ್ತುತ ಬಿಬಿಎಂಪಿ ಹೆರಿಗೆ ಆಸ್ಪತ್ರೆಗಳು ಘಟಕಗಳ ಮಟ್ಟದಲ್ಲಿ ಹಣಕಾಸಿನ ಹಂಚಿಕೆ ಹಾಗೂ ಖರ್ಚುಗಳ ವಿವರಗಳನ್ನು ಹೊಂದಿಲ್ಲ. ಕೇವಲ ಸಂಬಳ ಹಾಗೂ ಬಳಕೆದಾರರ

ಶುಲ್ಕಗಳ ಬಗೆಗಿನ ಮಾಹಿತಿಯು ಮಾತ್ರ ಘಟಕಮಟ್ಟದಲ್ಲಿ ಲಭ್ಯವಿದೆ. ಉಪಕರಣಗಳು, ಹೊದಿಕೆಗಳು, ಔಷಧಿಗಳು ಹಾಗೂ ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಬಿಬಿಎಂಪಿಯ ಆರೋಗ್ಯ ಇಲಾಖೆವತಿಯಿಂದ ಕೇಂದ್ರ ಮಟ್ಟದಲ್ಲಿ ಖರೀದಿಸಲಾಗುತ್ತಿದೆ. ಬಿಬಿಎಂಪಿಯ ಹಿರಿಯ ಅಧಿಕಾರಿಗಳಿಂದ ತಿಳಿದುಬಂದಿರುವುದೇನೆಂದರೆ ಆರೋಗ್ಯ ಇಲಾಖೆಯ ಮುಖ್ಯ ಕಛೇರಿಯಲ್ಲಿಯೂ ಸಹ ವಾರ್ಷಿಕ ಹಣಕಾಸಿನ ಹಂಚಿಕೆ ಮತ್ತು ವೆಚ್ಚದ ಬಗ್ಗೆ ದಾಖಲೆ ಇಲ್ಲ, ಪ್ರಕಟಣೆಯೂ ಇಲ್ಲ. ಆದ್ದರಿಂದ ನಮ್ಮ ಮುಂದಿನ ಪ್ರಯತ್ನವೆಂದರೆ ಹೆರಿಗೆ ಆಸ್ಪತ್ರೆಯ ಮಟ್ಟದಲ್ಲಿ ಆಯವ್ಯಯದ ಹಂಚಿಕೆ ಮತ್ತು ವೆಚ್ಚವನ್ನು ಮಾಡುವುದರ ಮೂಲಕ ಪಾರದರ್ಶಕತೆಯನ್ನು ತರುವುದು.

**ಮಡಿಲು ಕಿಟ್‌ನ ಹಂಚಿಕೆಯನ್ನು ಸುಧಾರಿಸುವುದು**

ಬಿಬಿಎಂಪಿಯ ಆಯವ್ಯಯದಲ್ಲಿ ಆರೋಗ್ಯದ ಆರೈಕೆಗೆ ಇರುವ ಆಯವ್ಯಯವನ್ನು ಅಧ್ಯಯನ ಮಾಡಿದಾಗ, ಕಂಡು ಬಂದ ಅಂಶವೆಂದರೆ: ಒಂದು ಸರಳ ಲೆಕ್ಕಾಚಾರದ ಮೂಲಕ ಕಿಟ್‌ಗಳನ್ನು ಕೊಳ್ಳಲಾಗಿದೆ. ಆದರೆ ಅದು ಆಯವ್ಯಯದ ಲೈನ್ ಐಟಂನಲ್ಲಿರುವ ಹಣಕ್ಕಿಂತ ಬಹಳ ಅಂತರದಲ್ಲಿದೆ. ಪಿಎಸಿಯ ಅನಿಸಿಕೆ ಎಂದರೆ ಈ ಕಿಟ್ ನಗರದ ಬಡಜನರಿಗೆ ನೀಡುವುದು ಒಳ್ಳೆಯ ಸಹಾಯವಿದ್ದಂತೆ, ಇದಕ್ಕಾಗಿ ಆಯವ್ಯಯದ ಹಂಚಿಕೆಯಲ್ಲಿ ನಿರ್ಧಿಷ್ಟ ಮೊತ್ತದ ಹಣವನ್ನು ಕಾಯ್ದಿರಿಸಲು ವಕಾಲತ್ತಿನ ತಂತ್ರದ ಅಗತ್ಯವಿದೆ.

**ಪ್ರಸ್ತುತ ಅಧ್ಯಯನದಲ್ಲಿ ಬಳಸಿದ ಸಾಧನಗಳನ್ನು ವಿಸ್ತರಿಸುವುದು**

ಪ್ರಸ್ತುತವಿರುವ 3 ಸಹಭಾಗಿ ಎನ್‌ಜಿಓಗಳ ಸಹಾಯದಿಂದ, ಸಿದ್ಧಪಡಿಸಿರುವ ಕರಡು ಸಾಧನಗಳನ್ನು ಇನ್ನೂ ಕೆಲವು ಹೆರಿಗೆ ಆಸ್ಪತ್ರೆಗಳಲ್ಲಿ ಪರೀಕ್ಷಿಸುವುದು. ಮುಂದಿನ ಯೋಜನೆಯಲ್ಲಿ ಈ ಸಾಧನಗಳ ಪರಿಣಾಮ ಮತ್ತು ದಕ್ಷತೆಯನ್ನು ತಿಳಿಯಲು ಇದರ ಪರೀಕ್ಷೆಯನ್ನು ಮಾಡಲಾಗುವುದು. ಸಿಆರ್‌ಸಿ ಚಟುವಟಿಕೆಯ ಕೊನೆಯಲ್ಲಿ ಬರುವ ಫಲಿತಾಂಶದಿಂದ ಈ ಸಾಧನ ಉಪಯೋಗಿಸಿಕೊಂಡು ಆಸ್ಪತ್ರೆಯ ಸೇವೆಯ ಗುಣಮಟ್ಟವನ್ನು ಪರೀಕ್ಷಿಸಿ ಸೂಕ್ತ ಪರಿಹಾರವನ್ನು ಕಂಡುಕೊಳ್ಳುವುದು.

**ಹೆರಿಗೆ ಆಸ್ಪತ್ರೆಯ ಗುಣಮಟ್ಟದ ಮೇಲ್ವಿಚಾರಣೆಯನ್ನು ಮಾಡಲು ಸಮುದಾಯದ ಮೇಲ್ವಿಚಾರಣೆಯ ತಂತ್ರವನ್ನು ಬಲಪಡಿಸುವುದು**

ಈ ಪ್ರಕ್ರಿಯೆಯು ಪ್ರಾರಂಭದಲ್ಲಿ, ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರಿಗೆ ಎರಡು ರೀತಿಯ ಚಟುವಟಿಕೆಗಳನ್ನು ಒಳಗೊಂಡಿದೆ. ಹೆರಿಗೆ ಆಸ್ಪತ್ರೆಯ ಸೇವೆಗಳನ್ನು ಮೇಲ್ವಿಚಾರಣೆ ಮಾಡುವ ಮೂಲಕ ಅದನ್ನು ಉತ್ತಮಗೊಳಿಸುವುದು. ಸಮುದಾಯದ

ಜನರಿಗೆ ಗರ್ಭಿಣಿ ಆರೋಗ್ಯ ಮತ್ತು ಅದರ ಲಾಭಗಳ ಬಗ್ಗೆ ಹೆರಿಗೆ ಆಸ್ಪತ್ರೆಗೆ ಬರುವ ಜನರಿಗೆ ಮಾಹಿತಿಯ ಕೊರತೆ ಇದ್ದರೆ ಅದರ ಬಗ್ಗೆ ಜಾಗೃತಿಯನ್ನು ಮೂಡಿಸುವುದು. ಇದಕ್ಕೆ ಅನುಗುಣವಾಗಿ ಆಯವ್ಯಯದ ಮಹತ್ವವನ್ನು ಅರ್ಥಮಾಡಿಕೊಳ್ಳಲು, ಅವರಿಗೆ ಕೆಲವೊಂದು ಅರಿವಿನ ತರಬೇತಿಯ ಅಗತ್ಯವಿದೆ. ಇದಕ್ಕೆ ಸಂಬಂದಿಸಿದ ರೀತಿಯಲ್ಲಿ ಪರಿಣಾಮಕಾರಿಯಾದ ಮಾರ್ಗದರ್ಶನ ಮಾಡುವುದು.

**ಪ್ರಸ್ತುತವಿರುವ ಪಾಲುದಾರ ಎನ್‌ಜಿಓಗಳ ಜೊತೆ ಸಂಬಂದವನ್ನು ಗಟ್ಟಿಗೊಳಸುವುದು**

ಪ್ರಸ್ತುತದಲ್ಲಿ 3 ಪಾಲುದಾರ ಎನ್‌ಜಿಓಗಳು ಪಿಎಸಿ ಜೊತೆ ಉತ್ತಮ ಪಾಲುದಾರಿಕೆಯ ಸಂಬಂದವನ್ನು ಹೊಂದಿರುವುದು ಸಾಕ್ಷಿಯಾಗಿದೆ. ಸ್ವ್ಯಾಡ್ ಸಿಫಾರ್, ಮತ್ತು ಅಪ್ಸ ಇವುಗಳ ಜೊತೆ ಪಾಲುದಾರಿಕೆಯನ್ನು ಮುಂದುವರಿಸುವುದು ಬಹಳ ಮುಖ್ಯ ಮತ್ತು ಅವುಗಳಗೆ ಪ್ರೋತ್ಸಾಹವನ್ನು ನೀಡುವುದರ ಮೂಲಕ, ವಕಾಲತ್ತಿಗಾಗಿ ಅವರಿಗೆ ಅವಶ್ಯಕತೆವಿರುವ ಕಡೆ ಸಲಹೆಯನ್ನು ನೀಡುವುದು.

**ಪ್ರಾರಂಭದ ಸಾಮರ್ಥ್ಯವನ್ನು ಬಲಪಡಿಸುವುದು**

ಪಿಎಸಿಯು ಇಲ್ಲಿಯವರೆಗೆ ಹೆಚ್ಚಿನ ಯಶಸ್ಸನ್ನು ಸಾಧಿಸಿದ್ದು, ಇದರ ಕಾರ್ಯವ್ಯಾಪ್ತಿಯನ್ನು ವಿಸ್ತರಿಸುವ ಪ್ರಕ್ರಿಯೆಯಲ್ಲಿ ಹೆಚ್ಚಿನ ಕೆಲಸವನ್ನು ಮಾಡುವ ಉದ್ದೇಶವನ್ನು ಹೊಂದಿದೆ. ತಂಡವು ಈಗಾಗಲೇ ಬಿಬಿಎಂಪಿಯ ಆರೋಗ್ಯ ವಿಭಾಗದ ಸೇವೆಯಲ್ಲಿ ರಚನಾತ್ಮಕವಾದ ಸುಧಾರಣೆಯನ್ನು ತರಲು ಭಾಗಶ: ಪ್ರಕ್ರಿಯೆಯನ್ನು ಪ್ರಾರಂಭಿಸಿದೆ. ಈ ಅಧ್ಯಯನದಲ್ಲಿ ಬಳಸಿದ ಸಾಧನೆಗಳನ್ನು ಬಳಸಿಕೊಂಡು ಪಾಲುದಾರ ಎನ್‌ಜಿಓಗಳ ಮೂಲಕ ಈ ಯೋಜನೆಯ ವ್ಯಾಪ್ತಿಯನ್ನು ಇನ್ನೂ 6 ಹೆರಿಗೆ ಆಸ್ಪತ್ರೆಗಳಗೆ (ಪ್ರತಿ ವಲಯದಲ್ಲಿಯೂ 2 ಹೆರಿಗೆ ಆಸ್ಪತ್ರೆಯಂತೆ) ವಿಸ್ತರಿಸುವ ಮೂಲಕ ಅಲ್ಲಿ ಹೊಸ ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯನ್ನು ರಚಿಸುವುದರ ಮೂಲಕ ಸೇವೆಯನ್ನು ಮೇಲ್ವಿಚಾರಣೆ ಮಾಡುವ ಗುರಿಯನ್ನು ಹೊಂದಿದೆ. ಪ್ರಸ್ತುತ ಯೋಜನೆ ಫಲಿತಾಂಶವನ್ನು ಆಳವಾಗಿ ನೋಡಿದಾಗ, ಪ್ರಸ್ತುತ ಸಮುದಾಯದ ಗುಂಪುಗಳು (ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರು) ನಿರಂತರವಾಗಿ ಸಮುದಾಯದ ಬಳಕೆದಾರರೊಂದಿಗೆ ಮತ್ತು ಆಸ್ಪತ್ರೆಯ ಸಿಬ್ಬಂದಿಗಳೊಂದಿಗೆ ಸಂಪರ್ಕದಲ್ಲಿರುವುದರಿಂದ ಪರಿಣಾಮಕಾರಿ ಕೆಲಸ ನಿರ್ವಹಿಸಲು ಸಾಧ್ಯವಾಗುತ್ತಿದೆ. ಈ ಕೆಲಸದ ವ್ಯಾಪ್ತಿಯನ್ನು ಹೆಚ್ಚಿಸಲು ಆಯವ್ಯಯದ ವಕಾಲತ್ತನ್ನು ವಿಸ್ತರಿಸುವ ಮೂಲಕ ಇದರ ಆಳವನ್ನು ಇನ್ನೂ ಹೆಚ್ಚಿಸಲಾಗಿದೆ.

ಈ ಯೋಜನೆಯ ಮುಖ್ಯ ಸವಾಲೆಂದರೆ, ಆಯವ್ಯಯವನ್ನು ಅರ್ಥಮಾಡಿಕೊಳ್ಳುವುದು ಮತ್ತು ಅದನ್ನು ಆಯವ್ಯಯದ ವಕಾಲತ್ತಿಗಾಗಿ ಒಂದು ಸಾಧನವನ್ನಾಗಿ ಬಳಸಿಕೊಂಡು

ಸೇವೆಗಳ ಪಾರದರ್ಶಕತೆಯನ್ನು ಉತ್ತಮಗೊಳಿಸುವುದು. ಇದಕ್ಕೆ ಸಂಬಂದಿಸಿದಂತೆ, ಆಯವ್ಯಯದ ವಿಚಾರದ ಬಗ್ಗೆ ಸರಿಯಾದ ಮಾಹಿತಿಯನ್ನು ಹೊಂದಿರುವ ಸಂಪನ್ಮೂಲ ವ್ಯಕ್ತಿಯನ್ನು ಗುರುತಿಸಿ, ಬೆಂಗಳೂರಿನಲ್ಲಿ ಒಂದು ಕಾರ್ಯಗಾರವನ್ನು ಏರ್ಪಡಿಸಲು ಉದ್ದೇಶಿಸಲಾಗಿದೆ. ಈ ಕಾರ್ಯಗಾರವು ಪಿಎಸಿ ಮತ್ತು ಅದರ ಸಹಭಾಗಿ ಎನ್‌ಜಿಓ ಗಳಿಗೆ ಘಟಕಮಟ್ಟದಲ್ಲಿನ ಆಯವ್ಯಯದ ಹಂಚಿಕೆ, ಆಯವ್ಯಯದ ಬಳಕೆ, ಆಯವ್ಯಯದ ಮಾಹಿತಿಯನ್ನು ಪಡೆಯುವುದು ಹಾಗೂ ಪಾರದರ್ಶಕತೆಯನ್ನು ತಿಳಿಯಲು ಸಹಾಯವಾಗುತ್ತದೆ. ಇದರಿಂದ ಪರಿಣಾಮಕಾರಿಯಾಗಿ ವಕಾಲತ್ತು ಮಾಡಬಹುದು.

ಪಿಎಸಿಯ ತಂಡವು ಹೆರಿಗೆ ಆಸ್ಪತ್ರೆಗಳು ಸೇವೆಗಳನ್ನು ಒದಗಿಸುವಲ್ಲಿ ಕಂಡುಬರುವ ಅಂತರವನ್ನು ತಿಳಿಯುವ ಸಲುವಾಗಿ – ಔಷಧಿಗಳ ಮತ್ತು ಸಲಕರಣೆಗಳ ಪೂರೈಕೆ (ಇಂಡೆಂಟ್), ಒಳರೋಗಿಗಳ ಆಹಾರ ಮತ್ತು ಬಳಕೆದಾರರ ಶುಲ್ಕಕ್ಕೆ ಸಂಬಂದಿಸಿದಂತೆ ಅಂದಾಜು ಮಾಡುವ ಆಯವ್ಯಯದ ವಿಶ್ಲೇಷಣೆಯ ಚಟುವಟಿಕೆಯನ್ನು ಕೈಗೊಂಡಿತು. ಈ ಪ್ರಕ್ರಿಯೆಯಿಂದ ಕಲಿತ ಪಾಠವೆಂದರೆ ಆಯವ್ಯಯದ ಪೂರ್ಣ ಪ್ರಕ್ರಿಯೆಯು ಬಹಳ ಗೊಂದಲಮಯವಾಗಿರುವುದರಿಂದ ಇದಕ್ಕೆ ಗಮನ ನೀಡಬೇಕು. ಏಕೆಂದರೆ ಇವುಗಳು ಸಮುದಾಯದವರ ಮೇಲೆ ನೇರ ಪರಿಣಾಮ ಬೀರುತ್ತವೆ. ಉದಾ: ಮಡಿಲು ಕಿಟ್‌ನ್ನು ಪಡೆಯುವುದು ಮತ್ತು ಅದನ್ನು ವಿತರಿಸುವುದು, ಜೆಎಸ್ ವೈ ಯೋಜನೆಯ ಲಾಭಗಳ ವಿತರಣೆ, ಒಳರೋಗಿಗಳಿಗೆ ಹಾಲು ಮತ್ತು ಬಳಕೆದಾರರ ಶುಲ್ಕದ ವ್ಯವಹಾರಕ್ಕೆ ಸಂಬಂದಿಸಿದಂತೆ ಸುಧಾರಣೆಯ ಅವಶ್ಯಕತೆ ಇದೆ.

ಆಡಳಿತ ವಿಫಲವಾದಾಗ, ನಾಗರಿಕರಿಗೆ ಯಾವುದೇ ಆಯ್ಕೆ ಇಲ್ಲ, ಆದರೆ ಸಾಮೂಹಿಕವಾಗಿ ಉತ್ತಮ ಆಡಳಿತದ ಬೇಡಿಕೆಯನ್ನು ಇಡುವ ಮೂಲಕ ಆಡಳಿತವನ್ನು ಪಾರದರ್ಶಕ ಮತ್ತು ಜವಾಬ್ದಾರಿಯನ್ನಾಗಿ ಮಾಡಬಹುದು. ಆದರೆ ಈ ಸಾಮೂಹಿಕ ನಿರ್ಧಾರಗಳು ಜ್ಞಾನದ ಕೊರತೆ ಹೊಂದಿದ್ದರೆ, ಕೇವಲ ಘೋಷಣೆಗಳಿಂದ ಶಾಶ್ವತ ಫಲಿತಾಂಶವನ್ನು ಕಾಣಲು ಸಾಧ್ಯವಿಲ್ಲ.

## 5.3 ಹೆರಿಗೆ ಆಸ್ಪತ್ರೆಗಳಲ್ಲಿ ತುರ್ತಾಗಿ ಆಗಬೇಕಿರುವ ಸುಧಾರಣೆಗಳು – ಸಂಕ್ಷಿಪ್ತವಾಗಿ

- ಹೆರಿಗೆ ಆಸ್ಪತ್ರೆಗಳ ಮಟ್ಟದಲ್ಲಿ ಆಯುವ್ಯಯುದ ತಯಾರಿಕೆ ಮತ್ತು ಹಂಚಿಕೆಯಾಗಬೇಕು. ಇದು ಸಾರ್ವಜನಿಕರಿಗೆ ಲಭ್ಯವಾಗುವ ರೀತಿಯಲ್ಲಿ ಪ್ರಕಟವಾಗಬೇಕು

- ಬಿಬಿಎಂಪಿಯ ಹೆರಿಗೆ ಆಸ್ಪತ್ರೆಯ ಆಯವ್ಯಯಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಸಂದರ್ಶಕ ಮಂಡಳಿಯ ಸದಸ್ಯರು, ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಸದಸ್ಯರ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸಬೇಕು. ಏಕೆಂದರೆ ಸಮುದಾಯದ ಸಮಸ್ಯೆಗಳನ್ನು ಇವರುಗಳು ಬಹಳ ಹತ್ತಿರದಿಂದ ಗಮನಿಸಿರುವುದರಿಂದ ಉತ್ತಮ ಯೋಜನೆಯನ್ನು ಜಾರಿಗೆ ತರಲು ಇದು ಸಹಾಯವಾಗುತ್ತದೆ.

- ಹೆರಿಗೆ ಆಸ್ಪತ್ರೆಯಲ್ಲಿ ಒಳರೋಗಿಗಳಿಗೆ ಒದಗಿಸುತ್ತಿರುವ ಹಾಲಿನ ಪೂರೈಕೆಯಲ್ಲಿ ಸುಧಾರಣೆ ತರಬೇಕು. ಎಲ್ಲಾ ಒಳರೋಗಿಗಳಿಗೂ ಪಾಲಿಕೆಯು ನಿಗಧಿ ಪಡಿಸಿರುವ ಆಹಾರವನ್ನು ನೀಡಬೇಕು (ದಿನಕ್ಕೆ 2 ಸಾರಿ 250 ಎಂ.ಎಲ್ ಹಾಲು, 1ಪೌಂಡ್ ಬ್ರೆಡ್ ಮತ್ತು 1 ಬಾಳೆಹಣ್ಣು), ಇದು ಬಳಕೆದಾರರಿಗೆ ಸಿಗುವ ಪೌಷ್ಟಿಕ ಆಹಾರವಾಗಿರುವುದರಿಂದ ಬಳಕೆದಾರರ ಶುಲ್ಕದ ಹಣದ ಉಪಯೋಗಕ್ಕೆ ಸಂಬಂಧಿಸಿದಂತೆ ಸುಧಾರಣೆಯನ್ನು ತರವು ಮೂಲಕ ಒಳರೋಗಿಗಳಿಗೆ ಹಾಲನ್ನು ಕೊಳ್ಳಲು ಅನುವು ಮಾಡಿಕೊಡಬೇಕು.

- ಹೆರಿಗೆ ಆಸ್ಪತ್ರೆಗಳಿಗೆ ಸ್ಕ್ಯಾನಿಂಗ್ ಸೌಲಭ್ಯವನ್ನು ನೀಡಬೇಕು. ಹಾಗೂ ಇದಕ್ಕೆ ಸ್ಕ್ಯಾನಿಂಗ್ ನಡೆಸಲು ಬೇಕಾಗುವ ತಜ್ಞರನ್ನು ನೇಮಕಮಾಡಬೇಕು.

- ಅಗತ್ಯ ಔಷಧಿಗಳ ಪಟ್ಟಿಮಾಡಬೇಕು ಮತ್ತು ಅವುಗಳನ್ನು ಹೆರಿಗೆ ಆಸ್ಪತ್ರೆಗಳಲ್ಲಿ ಉಚಿತವಾಗಿ ನೀಡಬೇಕು.

- ಜೆ. ಎಸ್. ವೈ. ಮತ್ತು ಮಡಿಲು ಯೋಜನೆಗಳಿಗೆ ಸಂಬಂಧಿಸಿದ ಅಗತ್ಯ ಮಾಹಿತಿಗಳನ್ನು ಮತ್ತು ಅದನ್ನು ಪಡೆಯಲು ಬೇಕಾದ ಅರ್ಹತೆಗಳನ್ನು ಗರ್ಭಿಣಿ ಮಹಿಳೆಯರು ಆಸ್ಪತ್ರೆಗೆ ತಪಾಸಣೆಗೆ ಬಂದಾಗ ತಿಳಿಸಬೇಕು. ಈ ಮಾಹಿತಿಗಳು ಅವರಿಗೆ ನೀಡಿರುವ ತಾಯಿ ಕಾರ್ಡ್‌ನಲ್ಲಿ ಇದ್ದರೂ ಸಹ ಅನಕ್ಷರಸ್ಥ ಮಹಿಳೆಯರಿಗೆ ಅರ್ಥವಾಗುವುದಿಲ್ಲ.

- ಆಸ್ಪತ್ರೆಯ ಸೇವೆಗಳನ್ನು ಮೇಲ್ವಿಚಾರಣೆಯನ್ನು ಸುಧಾರಿಸಲು ಸಮುದಾಯದ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸಬೇಕು. ಪ್ರಸ್ತುತವಿರುವ 3 ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣಾ ಸಮಿತಿಯ ಮಾದರಿಯನ್ನು ಉಳಿದ ಹೆರಿಗೆ ಆಸ್ಪತ್ರೆಗಳಿಗೂ ವಿಸ್ತರಿಸಬೇಕು.

- ಹೆರಿಗೆ ಆಸ್ಪತ್ರೆಯಲ್ಲಿ ದೊರೆಯುವ ಎಲ್ಲಾ ಸೇವೆ ಮತ್ತು ಸೌಲಭ್ಯಗಳು, ರಾಷ್ಟ್ರೀಯ ಕಾರ್ಯಕ್ರಮಗಳ ಬಗ್ಗೆ ಆಸ್ಪತ್ರೆಯಲ್ಲಿ ಮಾಹಿತಿಗಳನ್ನು ಪ್ರಕಟಿಸಬೇಕು ಮತ್ತು ಗರ್ಭಿಣಿಯ ಆರೈಕೆಯ ದಿನದಂದು ಟಿ.ವಿ ಪ್ರದರ್ಶನವನ್ನು ನಡೆಸಬೇಕು

# ಅನುಬಂಧಗಳು

## ಅನುಬಂಧ 1– ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣೆಯ ಸಮಿತಿಯ ಸದಸ್ಯರ ಚೆಕ್ ಲಿಸ್ಟ್

### ಭಾಗ–1 ಹೆರಿಗೆ ಆಸ್ಪತ್ರೆಯಲ್ಲಿ

| ಕ್ರಮ ಸಂಖ್ಯೆ | ವಿವರಗಳು | | | ಗಮನಿಸಿದ ಅಂಶಗಳು |
|---|---|---|---|---|
| 1 | ಯೋಜನೆ ಮತ್ತು ಲಾಭಗಳ ಬಗ್ಗೆ ಮಾಹಿತಿಯನ್ನು ತೋರಿಸುವ ವಿವರಗಳು | | | |
| 1.1 | ಜೆ.ಎಸ್.ವೈ ಯೋಜನೆಯನ್ನು ಪಡೆಯಲು ಬೇಕಾದ ಅರ್ಹತೆಯ ಮಾಹಿತಿಗಳು | ಹೌದು | ಇಲ್ಲ | |
| 1.2 | ಮಡಿಲು ಕಿಟ್ ದಾಸ್ತಾನಿನ ಮಾಹಿತಿಯ ಪ್ರದರ್ಶನ | ಹೌದು | ಇಲ್ಲ | |
| 1.3 | ಜೆ.ಎಸ್.ವೈ ಯೋಜನೆಯ ಫಲಾನುಭವಿಗಳ ಪ್ರಸ್ತುತ ವಿವರಗಳು | ಹೌದು | ಇಲ್ಲ | |
| 1.4 | ಕುಟುಂಬ ಯೋಜನೆಯ ಪ್ರೋತ್ಸಾಹ ಧನದ ವಿವರಗಳು | ಹೌದು | ಇಲ್ಲ | |
| 1.5 | ಅರಿವು ಮೂಡಿಸುವ ಚಾರ್ಟ್‌ಗಳ ಪ್ರದರ್ಶನ (ಎದೆಹಾಲಿನ ಮಹತ್ವ, ಹೆಚ್.ಐ.ವಿ/ಏಡ್ಸ್, ಟಿ.ಬಿ., ಡಾಟ್ಸ್ ಚಿಕಿತ್ಸೆ) | ಹೌದು | ಇಲ್ಲ | |
| 1.6 | ಎ.ಎನ್.ಸಿ ದಿನ ದಂದು ಟಿ.ವಿ. ಯಲ್ಲಿ ಮಾಹಿತಿಯನ್ನು ಪ್ರದರ್ಶಿಸುವುದು | ಹೌದು | ಇಲ್ಲ | |
| 1.7 | ಬಳಕೆದಾರರ ಶುಲ್ಕದ ವಿವರವನ್ನು ಪ್ರದರ್ಶಿಸಿರುವುದು. | ಹೌದು | ಇಲ್ಲ | |
| 1.8 | ಸಾರ್ವಜನಿಕ ದೂರುಗಳ ನಿರ್ವಹಣೆಗೆ ಸಂಬಂಧಿಸಿದಂತೆ ಹಿರಿಯ ಅಧಿಕಾರಿಗಳ ದೂರವಾಣಿ ಸಂಖ್ಯೆಯನ್ನು ಪ್ರದರ್ಶಿಸಿರುವುದು. | ಹೌದು | ಇಲ್ಲ | |
| 1.9 | ಕಾರ್ಯನಿರತ ಸಿಬ್ಬಂದಿಗಳ ವಿವರಗಳು | ಹೌದು | ಇಲ್ಲ | |

*ಹಾಲಿನ ಪ್ರಮಾಣ ಮತ್ತು ಗುಣಮಟ್ಟ

| | | | | | | |
|---|---|---|---|---|---|---|
| 2 | ಒಳರೋಗಿಗಳಿಗೆ ನೀಡುವ ಆಹಾರದ ಸರಬರಾಜಿನ ಬಗ್ಗೆ ಗಮನಿಸುವುದು. | | | | | |
| 2.1 | ಬ್ರೆಡ್(ದಿನಕ್ಕೆ ಒಂದು ಪೌಂಡ್) | | ಹೌದು | ಇಲ್ಲ | | |
| 2.2 | ಬಾಳೇಹಣ್ಣು(ಮೊಟ್ಟೆಯ ಬದಲಾಗಿ ಒಂದು ಬಾಳೇಹಣ್ಣು) | | ಹೌದು | ಇಲ್ಲ | | |
| 2.3 | ಮೊಟ್ಟೆ (ಬಾಳೇಹಣ್ಣಿನ ಬದಲಾಗಿ ಒಂದು ಮೊಟ್ಟೆ) | | ಹೌದು | ಇಲ್ಲ | | |
| 2.4 | ಹಾಲು'(ದಿನಕ್ಕೆ 2 ಸಾರಿ 250 ಎಂ.ಎಲ್) | | ಹೌದು | ಇಲ್ಲ | | |
| 3 | ಗರ್ಭಿಣಿ ಸ್ತ್ರೀಯರಿಗೆ ತಾಯಿ ಕಾರ್ಡನ್ನು ನೀಡುತ್ತಿರುವುದರ ಬಗ್ಗೆ ತಿಳಸುವುದು. | | ಹೌದು | ಇಲ್ಲ | | |
| 4 | ಬಳಕೆದಾರರ ಶುಲ್ಕಕ್ಕೆ ಸರಿಯಾದ ರಶೀದಿ ನೀಡುತ್ತಿರುವುದನ್ನು ಗಮನಿಸುವುದು | | ಹೌದು | ಇಲ್ಲ | | |
| 5 | ಹೆರಿಗೆ ಆಸ್ಪತ್ರೆಯ ಸ್ವಚ್ಛತೆಯನ್ನು ಗಮನಿಸುವುದು | | | | | |
| 5.1 | ಶೌಚಾಲಯದಲ್ಲಿ ನೀರಿನ ವ್ಯವಸ್ಥೆ | | ಹೌದು | ಇಲ್ಲ | | |
| 5.2 | ಕುಡಿಯುವ ನೀರಿನ ವ್ಯವಸ್ಥೆ | | ಹೌದು | ಇಲ್ಲ | | |
| 5.3 | ವಾರ್ಡ್‌ಗಳಲ್ಲಿ ಹಾಸಿಗೆ ಮತ್ತು ಹಾಸಿಗೆಯ ಮೇಲಿನ ಹೊದಿಕೆ ವ್ಯವಸ್ಥೆ (ದಿಂಬಿನ ಕವರ್ ಮತ್ತು ಹೊದಿಕೆ ಸೇರಿದಂತೆ) | | ಹೌದು | ಇಲ್ಲ | | |
| 5.4 | ವಾರ್ಡ್‌ಗಳ ಸ್ವಚ್ಛತೆ | | ಹೌದು | ಇಲ್ಲ | | |
| 6 | ರೆಫರಲ್ ಕೇಸುಗಳಿಗೆ ಆಂಬ್ಯುಲೆನ್ಸ್ ವ್ಯವಸ್ಥೆ (ರೆಫರಲ್ ಕಾರ್ಡ್‌ಗಳ ಮೂಲಕ) | | ಹೌದು | ಇಲ್ಲ | | |
| 7 | ಸಿಬ್ಬಂದಿಗಳ ಲಭ್ಯತೆ | ಕೆಲಸದ ವೇಳೆಯಲ್ಲಿ | | ಕೆಲಸದ ವೇಳೆಯ ನಂತರ | | ಗಮನಿಸಿದ ಅಂಶಗಳು |
| | | ಹೌದು | ಇಲ್ಲ | ಹೌದು | ಇಲ್ಲ | |
| | ವೈದ್ಯರು | ಹೌದು | ಇಲ್ಲ | ಹೌದು | ಇಲ್ಲ | |
| | ನರ್ಸ್‌ಗಳು | ಹೌದು | ಇಲ್ಲ | ಹೌದು | ಇಲ್ಲ | |
| | ಆಯಾಗಳು | ಹೌದು | ಇಲ್ಲ | ಹೌದು | ಇಲ್ಲ | |
| | ಪ್ರಯೋಗಾಲಯದ ಸಿಬ್ಬಂದಿ | ಹೌದು | ಇಲ್ಲ | ಹೌದು | ಇಲ್ಲ | |

ಭೇಟಿ ಮಾಡಿದ ದಿನಾಂಕ________________________________________

ಭೇಟಿ ಮಾಡಿದ ಸಮಯ________________________________________

**ಹೆರಿಗೆ ಆಸ್ಪತ್ರೆಗೆ ಭೇಟಿ ನೀಡಿದ ಸದಸ್ಯರ ಹೆಸರು**

| ಕ್ರಮ ಸಂಖ್ಯೆ | ಸದಸ್ಯರ ಹೆಸರು | ಸಹಿ |
|---|---|---|
| 1 | | |
| 2 | | |
| 3 | | |
| 4 | | |
| 5 | | |

## ಭಾಗ-2 ಸಮುದಾಯದ ಬೇಟಿಯಲ್ಲಿ

| ಕ್ರಮ ಸಂಖ್ಯೆ | ವಿವರಗಳು | ಹೌದು | ಇಲ್ಲ | ಗಮನಿಸಿದ ಅಂಶಗಳು |
|---|---|---|---|---|
| ಗರ್ಭಿಣಿಯ ಆರೈಕೆ | | | | |
| 1 | ಲಿಂಕ್ ವರ್ಕರ್‌ಗಳ ದೈನಂದಿನ ಭೇಟಿ | ಹೌದು | ಇಲ್ಲ | |
| 2 | ತಾಯಿ ಕಾರ್ಡಿನ್ನು ನೀಡಿರುವುದು | ಹೌದು | ಇಲ್ಲ | |
| 3 | ಐರನ್ ಆಂಡ್ ಫಾಲಿಕ ಅಸಿಡ್ ಮಾತ್ರೆಗಳನ್ನು ನೀಡುತ್ತಿರುವುದರ ಬಗ್ಗೆ | ಹೌದು | ಇಲ್ಲ | |
| 4 | ಸರಿಯಾಗಿ ಈ ಮಾತ್ರೆಗಳನ್ನು ಗರ್ಭಿಣಿ ಮಹಿಳೆಯರುತೆಗೆದುಕೊಳ್ಳುತ್ತಿದ್ದಾರಾ | ಹೌದು | ಇಲ್ಲ | |
| 5 | ಟೆಟನಸ್ ಚುಚ್ಚು ಮದ್ದು | ಹೌದು | ಇಲ್ಲ | |
| 6 | ದೈನಂದಿನ ಪರೀಕ್ಷೆ | ಹೌದು | ಇಲ್ಲ | |
| ಹೆರಿಗೆ ಆರೈಕೆ | | | | |
| 1 | ಹಾಸಿಗೆ ಮತ್ತು ಹೊದಿಕೆ | ಹೌದು | ಇಲ್ಲ | |
| 2 | ವಾರ್ಡ್‌ಗಳಲ್ಲಿ ಕುಡಿಯುವುದಕ್ಕೆ ಬಿಸಿನೀರಿನ ಸೌಲಭ್ಯದ ವ್ಯವಸ್ಥೆ | ಹೌದು | ಇಲ್ಲ | |
| 3 | ಒಳರೋಗಿಗಳ ಆಹಾರ | ಹೌದು | ಇಲ್ಲ | |
| 3.1 | ಬ್ರೆಡ್(ದಿನಕ್ಕೆ ಒಂದು ಪೌಂಡ್) | ಹೌದು | ಇಲ್ಲ | |

| | | | | |
|---|---|---|---|---|
| 3.2 | ಬಾಳೇಹಣ್ಣು (ಮೊಟ್ಟೆಯ ಬದಲಾಗಿ ಒಂದು ಬಾಳೇಹಣ್ಣು) | ಹೌದು | ಇಲ್ಲ | |
| 3.3 | ಮೊಟ್ಟೆ (ಬಾಳೇಹಣ್ಣಿನ ಬದಲಾಗಿ ಒಂದು ಮೊಟ್ಟೆ) | ಹೌದು | ಇಲ್ಲ | |
| 3.4 | ಹಾಲು (ದಿನಕ್ಕೆ 2 ಸಾರಿ 250 ಎಂ.ಎಲ್) | ಹೌದು | ಇಲ್ಲ | |
| 4 | ರೆಫರಲ್ ಕೇಸ್‌ಗಳಿಗೆ ಆಂಬ್ಯುಲೆನ್ಸ್ ಸೌಲಭ್ಯ ಒದಗಿಸಿರುವ ಬಗ್ಗೆ (ಹಗಲಿನ ವೇಳೆ) ಆಸ್ಪತ್ರೆಯ ನಿಯಾಮಾವಳಿಗನುಸಾರವಾಗಿ | ಹೌದು | ಇಲ್ಲ | |
| 5 | ರೆಫರಲ್ ಕೇಸ್‌ಗಳಿಗೆ ಆಂಬ್ಯುಲೆನ್ಸ್ ಸೌಲಭ್ಯ ಒದಗಿಸಿರುವ ಬಗ್ಗೆ (ರಾತ್ರಿ ವೇಳೆಯಲ್ಲಿ) ಆಸ್ಪತ್ರೆಯ ನಿಯಾಮಾವಳಿಗನುಸಾರವಾಗಿ | ಹೌದು | ಇಲ್ಲ | |
| **ಚುಚ್ಚುಮದ್ದು** | | | | |
| 1 | ಚುಚ್ಚುಮದ್ದನ್ನು ನಿಗದಿಯಾದ ದಿನದಲ್ಲಿಯೆ ನೀಡಲಾಗುತ್ತಿದೆಯೇ | ಹೌದು | ಇಲ್ಲ | |
| 2 | ಚುಚ್ಚುಮದ್ದಿಗೆ ಬಳಸಿ ಬಿಸಾಡುವ ಸಿರೆಂಜನ್ನು ಬಳಸಲಾಗುತ್ತಿದೆಯೇ | ಹೌದು | ಇಲ್ಲ | |
| **ಕುಟುಂಬ ಯೋಜನೆಯ ಆಪ್ತಸಮಾಲೋಚನೆ** | | | | |
| 1 | ಕುಟುಂಬ ಯೋಜನೆಯ ಅವಶ್ಯಕತೆಯ ಬಗ್ಗೆ ಆಪ್ತಸಮಾಲೋಚನೆ ಮಾಡಲಾಗುತ್ತಿದೆಯೇ | ಹೌದು | ಇಲ್ಲ | |
| 2 | ಕುಟುಂಬ ಯೋಜನೆಯ ವಿಧಾನದಬಗ್ಗೆ ಆಪ್ತಸಮಾಲೋಚನೆ ಮಾಡಲಾಗುತ್ತಿದೆಯೇ | ಹೌದು | ಇಲ್ಲ | |
| 3 | ಕುಟುಂಬ ಯೋಜನೆಯ ವಿಧಾನಗಳನ್ನು ಅಳವಡಿಸಲಾಗಿದೆಯೇ | ಹೌದು | ಇಲ್ಲ | |
| 3.1 | ತಾತ್ಕಾಲಿಕ ವಿಧಾನಗಳು | ಹೌದು | ಇಲ್ಲ | |
| 3.2 | ಶಾಶ್ವತ ವಿಧಾನಗಳು | ಹೌದು | ಇಲ್ಲ | |
| 4 | ಯೋಜನೆಗಳ ಆಪ್ತಸಮಾಲೋಚನೆ | ಹೌದು | ಇಲ್ಲ | |

| ಇತರ ಸೇವೆಗಳಿಗೆ ಸಂಬಂಧಿಸಿದಂತೆ | | | | |
|---|---|---|---|---|
| 1 | ಬಳಕೆದಾರರ ಶುಲ್ಕಕ್ಕೆ ಸರಿಯಾದ ರಶೀದಿ ನೀಡಿರುವ ಬಗ್ಗೆ | ಹೌದು | ಇಲ್ಲ | |
| 2 | ಬಳಕೆದಾರರ ಶುಲ್ಕಕ್ಕೆ ಪೂರ್ಣ ಪ್ರಮಾಣದ ರಶೀದಿ ನೀಡಿರುವ ಬಗ್ಗೆ | ಹೌದು | ಇಲ್ಲ | |
| 3 | ಯೋಜನೆಗಳ ಲಾಭವನ್ನು ವಿತರಿಸಿರುವ ಬಗ್ಗೆ | ಹೌದು | ಇಲ್ಲ | |

ಸಲಹೆಗಳು/ ಸಮಸ್ಯೆಗಳು

______________________________

______________________________

______________________________

______________________________

______________________________

______________________________

______________________________

ಭೇಟಿ ಮಾಡಿದ ದಿನಾಂಕ------------------------------------------

ಭೇಟಿ ಮಾಡಿದ ಸಮಯ------------------------------------------

ಹೆರಿಗೆ ಆಸ್ಪತ್ರೆಗೆ ಭೇಟಿ ನೀಡಿದ ಬಳಕೆದಾರರನ್ನು ಭೇಟಿ ಮಾಡಿದ ಸದಸ್ಯರ ಹೆಸರುಗಳು

| ಕ್ರಮ ಸಂಖ್ಯೆ | ಸದಸ್ಯರ ಹೆಸರು | ಸಹಿ |
|---|---|---|
| 1 | | |
| 2 | | |
| 3 | | |
| 4 | | |
| 5 | | |

ಚೆಕ್ ಲಿಸ್ಟ್‌ಗಳು ದೇಶಿಯ ಭಾಷೆಗಳಾದ ಕನ್ನಡ ಮತ್ತು ತಮಿಳು ಭಾಷೆಯಲ್ಲಿ ಲಭ್ಯವಿದೆ.

## ಅನುಬಂಧ -2. ಹೆರಿಗೆ ಆಸ್ಪತ್ರೆಯ ಮೇಲ್ವಿಚಾರಣೆಯ ಸಮಿತಿಯ ಸದಸ್ಯರ ಪಾತ್ರ ಮತ್ತು ಜವಾಬ್ದಾರಿಗಳು

**ಸದಸ್ಯರ ಆಯ್ಕೆ ವಿಧಾನ:**

- ಹೆರಿಗೆ ಆಸ್ಪತ್ರೆಯ ವ್ಯಾಪ್ತಿಗೆ ಒಳಪಡುವ ಸ್ಥಳದಲ್ಲಿ ವಾಸಮಾಡುವ ಸಮುದಾಯದ ಸದಸ್ಯರಿಂದ ಆಯ್ಕೆಯಾದ ಅಥವಾ ಚುನಾಯಿತರಾದ ಸಮುದಾಯದ ಪ್ರತಿನಿಧಿ.
- ಸ್ವಯಂ ಪ್ರೇರಿತವಾಗಿ ಕೆಲಸ ಮಾಡುವ ಇಚ್ಛೆಯಿರುವವರು.
- ಆಸ್ಪತ್ರೆಯ ಕಾರ್ಯಗಳನ್ನು ಮಾಡಲು ಆಸಕ್ತಿಯಿರುವವರು
- ಆಸ್ಪತ್ರೆಯ ಬಳಕೆದಾರರೊಂದಿಗೆ ಆಸ್ಪತ್ರೆಯಲ್ಲಿ ದೊರೆಯುವ ಸೇವೆಗಳ ಬಗ್ಗೆ ಚರ್ಚಿಸುವ ಇಚ್ಛೆಯಿರುವವರು.

**ಸಮಿತಿಯ ಸದಸ್ಯರ ಪಾತ್ರ ಮತ್ತು ಜವಾಬ್ದಾರಿಗಳು**

**ಆಸ್ಪತ್ರೆಗೆ ಸಂಬಂಧಿಸಿದಂತೆ:**

- ಆಸ್ಪತ್ರೆಯ ಸಿಬ್ಬಂದಿಗಳಿಂದ ಆಸ್ಪತ್ರೆಯಲ್ಲಿ ದೊರೆಯುವ ಸೇವೆಗಳ ಮತ್ತು ಯೋಜನೆಗಳ ಬಗ್ಗೆ ಮಾಹಿತಿಯನ್ನು ಪಡೆಯುವುದು.
- ಆಸ್ಪತ್ರೆಗೆ ಭೇಟಿ ನೀಡಿ ಇವುಗಳನ್ನು ಗಮನಿಸುವುದು
- ಆಸ್ಪತ್ರೆಯ ಆವರಣದ ಸ್ವಚ್ಛತೆ
- ಶೌಚಾಲಯದಲ್ಲಿ ನೀರಿನ ವ್ಯವಸ್ಥೆ
- ಕುಡಿಯುವ ನೀರನ ವ್ಯವಸ್ಥೆ
- ವಾರ್ಡಿನಲ್ಲಿರುವ ಹಾಸಿಗೆ ಹೊದಿಕೆ ವ್ಯವಸ್ಥೆ ಮತ್ತು  ಅದರ ಸ್ವಚ್ಛತೆ (ಹೊದಿಕೆ ಮತ್ತು ದಿಂಬಿನ ಕವರ್ ಸೇರಿದಂತೆ)
- ಒಳರೋಗಿಗಳಿಗೆ ಪೂರೈಸುವ ಆಹಾರದ ವ್ಯವಸ್ಥೆ

**ಆಸ್ಪತ್ರೆಯಲ್ಲಿ ಮಾಹಿತಿಗಳನ್ನು ಪ್ರದರ್ಶಿಸಿರುವ ಬಗ್ಗೆ ಮೇಲ್ವಿಚಾರಣೆ ಮಾಡುವುದು**

- ಸಾರ್ವಜನಿಕರ ದೂರುಗಳ ನಿರ್ವಹಣೆಗೆ ಸಂಬಂಧಿಸಿದಂತೆ ಆಸ್ಪತ್ರೆಯ ಹಿರಿಯ ಅಧಿಕಾರಿಗಳ ದೂರವಾಣಿ ಸಂಖ್ಯೆಯನ್ನು ಆಸ್ಪತ್ರೆಯಲ್ಲಿ ಪ್ರಕಟಿಸಿರುವುದು.

- ಆಸ್ಪತ್ರೆಯಲ್ಲಿ ಆರೋಗ್ಯ ಸೇವೆಗಳ ಕುರಿತು ಅರಿವು ಮೂಡಿಸಲು ಟಿ.ವಿ. ಯಲ್ಲಿ ಚಿತ್ರಗಳನ್ನು ಪ್ರದರ್ಶಿಸುವುದು ಹಾಗೂ ಇತರೆ ಮಾಹಿತಿ ಫಲಕಗಳನ್ನು ಪ್ರದರ್ಶಿಸಿರುವುದನ್ನು ಗಮನಿಸುವುದು.
- ಬಳಕೆದಾರರ ಶುಲ್ಕದ ವಿವರದ ಪಟ್ಟಿಯನ್ನು ಪ್ರದರ್ಶಿಸಿರುವ ಬಗ್ಗೆ ಗಮನಿಸುವುದು.
- ಆಸ್ಪತ್ರೆಯಲ್ಲಿ ಮಡಿಲು ಕಿಟ್ ದಾಸ್ತಾನಿನ ಮಾಹಿತಿ ಫಲಕವನ್ನು ಪ್ರಕಟಿಸಿರುವುದು ಮತ್ತು ದಾಸ್ತಾನಿನ ವಿವರವನ್ನು ಕಾಲಕಾಲಕ್ಕೆ ದೃಢ ಪಡಿಸುವುದನ್ನು ಗಮನಿಸುವುದು.
- ಜೆ.ಎಸ್.ವೈ ಹಾಗೂ ಇತರೆ ಯೋಜನೆಗಳ ಲಾಭವನ್ನು ಪಡೆಯುವ ವಿಧಾನವನ್ನು ತಿಳಿಸುವ ಬಗ್ಗೆ ಮಾಹಿತಿಯನ್ನು ಪ್ರದರ್ಶಿಸಿರುವುದನ್ನು ಗಮನಿಸುವುದು.

**ಸಿಬ್ಬಂದಿಗಳ ಲಭ್ಯತೆಯನ್ನು ಗಮನಿಸುವುದು**

- ಸಂದರ್ಶಕ ಮಂಡಳಿಯು ಸಭೆಯಲ್ಲಿ ಭಾಗವಹಿಸುವುದು ಹಾಗೂ ಸಮುದಾಯದವರ ಆರೋಗ್ಯಕ್ಕೆ ಸಂಬಂಧಿಸಿದಂತೆ ಕಂಡುಬರುವ ಸಮಸ್ಯೆಗಳನ್ನು ಚರ್ಚಿಸುವುದು.
- ಎರಡು ತಿಂಗಳಿಗೊಮ್ಮೆ ಆಸ್ಪತ್ರೆಯ ವೈದ್ಯಾಧಿಕಾರಿಗಳೊಂದಿಗೆ ಸಭೆಯಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಚರ್ಚಿಸುವುದು.

**ಸಮುದಾಯಕ್ಕೆ ಸಂಬಂಧಿಸಿದಂತೆ**

- ಸಮುದಾಯದವರೊಂದಿಗೆ ವಾರಕ್ಕೊಮ್ಮೆಯಾದರೂ ಸಂದರ್ಶಿಸಿ ಆರೋಗ್ಯ ಮತ್ತು ಸ್ವಚ್ಛತೆಯ ಬಗ್ಗೆ, ಹೆರಿಗೆ ಆಸ್ಪತ್ರೆಯಲ್ಲಿ ದೊರೆಯುವ ಸೇವೆಗಳ ಹಾಗೂ ಯೋಜನೆಗಳ ಬಗ್ಗೆ ಮಾಹಿತಿ ನೀಡುವುದು ಹಾಗೂ ಅವರ ಸಮಸ್ಯೆಗಳನ್ನು ಬರೆದುಕೊಳ್ಳುವುದು.
- ಎ.ಎನ್.ಎಮ್ ಹಾಗೂ ಲಿಂಕ್ ವರ್ಕರ್‌ಗಳ ಕಾರ್ಯ ಚಟುವಟಿಕೆಗಳನ್ನು ಗಮನಿಸುವುದು.
- ಆಸ್ಪತ್ರೆಯ ಸಿಬ್ಬಂದಿಗಳ ಲಭ್ಯತೆ ಹಾಗೂ ಅವರ ನಡವಳಿಕೆಯ ಬಗ್ಗೆ ತಿಳಿಯುವುದು.

- ಬಳಕೆದಾರರ ಶುಲ್ಕವನ್ನು ತೆಗೆದುಕೊಳ್ಳುವ ಹಾಗೂ ಅದಕ್ಕೆ ರಶೀದಿ ನೀಡುವ ಬಗ್ಗೆ ತಿಳಿಯುವುದು.ಇತರೆ ಆಸ್ಪತ್ರೆಗಳಿಗೆ ರೆಫರ್ ಮಾಡುವ ಸಮಯದಲ್ಲಿ ಆಂಬ್ಯುಲೆನ್ಸ್ ವ್ಯವಸ್ಥೆಯ ಬಗ್ಗೆ ಪರಿಶೀಲಿಸುವುದು.
- ತಾಯಿ ಕಾರ್ಡನ್ನು ವಿತರಿಸಿರುವ ಬಗ್ಗೆ ಪರಿಶೀಲಿಸುವುದು

**ಆಸ್ಪತ್ರೆಯ ಸಿಬ್ಬಂದಿಗಳಿಂದ ಬೇಕಾಗುವ ಸಹಾಯಗಳು**:

- ಹೆರಿಗೆ ಆಸ್ಪತ್ರೆಯಲ್ಲಿ ಸಮಿತಿಯ ಸದಸ್ಯರ ಹೆಸರು, ವಿಳಾಸ, ದೂರವಾಣಿ ಸಂಖ್ಯೆಯನ್ನು ಪ್ರದರ್ಶಿಸುವುದು.
- ಸಹಾಯವೇದಿಕೆಗೆ ಬೇಕಾಗುವ ಮೂಲ ಸೌಕರ್ಯಗಳನ್ನು ಒದಗಿಸುವುದು (ಮೇಜು, ಕುರ್ಚಿ, ನೋಟ್ ಪುಸ್ತಕ, ಪೆನ್)
- ಆಸ್ಪತ್ರೆಯ ಮುಖ್ಯಸ್ಥರು ಆಸ್ಪತ್ರೆಯಲ್ಲಿ ದೊರೆಯುವ ಸೇವೆಗಳು ಮತ್ತು ಸೌಲಭ್ಯಗಳ ಬಗ್ಗೆ ಸಮಿತಿಯ ಸದಸ್ಯರಿಗೆ ಮಾಹಿತಿಯನ್ನು ನೀಡಬೇಕು ಹಾಗೂ ಕಾಲಕಾಲಕ್ಕೆ ಆಗುವ ಬದಲಾವಣೆಗಳ ಬಗ್ಗೆ ಮಾಹಿತಿಯನ್ನು ನೀಡಬೇಕು.
- ಸಮುದಾಯದ ಸಮಿತಿಯ ಸದಸ್ಯರ ಜೊತೆ 2 ತಿಂಗಳಿಗೊಮ್ಮೆ ಆಸ್ಪತ್ರೆಯಲ್ಲಿ ಸಭೆ ಸೇರಬೇಕು ಮತ್ತು ಸಮಸ್ಯೆಗಳನ್ನು ಬಗೆಹರಿಸಬೇಕು.
- ಸಮಿತಿಯ ಸದಸ್ಯರನ್ನು ಸಂದರ್ಶಕ ಮಂಡಳಿಯ ಸಭೆಗೆ ಭಾಗವಹಿಸಲು ಅವಕಾಶ ಮಾಡಿಕೊಡಬೇಕು.

# ಅನುಬಂಧ 3– ಹೆರಿಗೆ ಆಸ್ಪತ್ರೆಗಳಗೆಂದು ತಯಾರಿಸಲಾದ ಬಳಕೆದಾರರ ಶುಲ್ಕದ ಪಟ್ಟಿ






ಬಿ.ಬಿ.ಎಂ.ಪಿ ಹೆರಿಗೆ ಆಸ್ಪತ್ರೆಯ ಬಳಕೆದಾರರ ಶುಲ್ಕದ ವಿವರಗಳು

**BBMP MATERNITY HOME USER FEE DETAILS**

| ಕ್ರಮ ಸಂಖ್ಯೆ Sl.No | ಚಿಕಿತ್ಸೆಯ ವಿವರಗಳು | Service Classification | ಶುಲ್ಕಗಳು User Fee |
|---|---|---|---|
| 1 | ಹೊರರೋಗಿ ನೋಂದಣಿ ಶುಲ್ಕ | Out-patient fee | 5.00 |
| 2 | ಸಹಜ ಪ್ರಸೂತಿ ವೆಚ್ಚ | Normal delivery | 300.00 |
| 3 | ಸಹಜ ಪ್ರಸೂತಿ ವೆಚ್ಚ–ಶಸ್ತ್ರಕರ ಹೆರಿಗೆ | Normal delivery with episiotomy | 350.00 |
| 4 | ಲೋ ಫೋರ್ಸೆಪ್ಸ್ ಹೆರಿಗೆ | Low forceps delivery | 300.00 |
| 5 | ಡಿ. ಅಂಡ್.ಸಿ | D and C (Gynaec) | 100.00 |
| 6 | ಇವಾಕ್ಯುಯೇಶನ್ | Evacuation | 150.00 |
| 7 | ವೈದ್ಯಕೀಯ ಗರ್ಭಪಾತ | M.T.P | 150.00 |
| 8 | ಸ್ಕ್ಯಾನಿಂಗ್ | Scanning | 100.00 |
| 9 | ರಕ್ತದ ಸಕ್ಕರೆ ಪ್ರಮಾಣ | Blood Sugar | 20.00 |
| 10 | ಆಂಟಿ ರೇಬಿಸ್ ಚುಚ್ಚುಮದ್ದು | Anti Rabies Vaccine | 100.00 |
| 11 | ರಕ್ತದ ಹಿಮೋಗ್ಲೋಬಿನ್ ಅಂಶ | Blood HB | 10.00 |
| 12 | ರಕ್ತದ ಗುಂಪು ಮತ್ತು ಆರ್ ಎಚ್ | Blood Grouping and Rh typing | 20.00 |
| 13 | ರಕ್ತದ ವಿ.ಡಿ.ಆರ್.ಎಲ್ | Blood VDRL | 10.00 |
| 14 | ಸೀರಮ್ ಕ್ರಿಯಾಟಿನಿನ್ | Serum Creatinine | 20.00 |
| 15 | ದೈಹಿಕ ಸ್ವಸ್ಥತೆಯ ಪ್ರಮಾಣ ಪತ್ರ | Medical Fitness Certificate | 20.00 |
| 16 | ಜನನ ಪ್ರಮಾಣ ಪತ್ರ (ಮೊದಲ ಪ್ರತಿ ಉಚಿತ) | Birth Certificate (First copy is free) | 50.00 |
| 17 | ಬಿ.ಬಿ.ಎಂ.ಪಿ ಆಸ್ಪತ್ರೆಯಲ್ಲಿ ನರ್ಸಿಂಗ್ ವಿದ್ಯಾರ್ಥಿಗಳ ತರಬೇತಿ | Training for nursing students in BBMP Hospitals | 2000.00 |

*ರಶೀದಿಯ ಮಾದರಿ* *Receipt specimen*



**ಕೆಳಕಂಡವರು ಸೇವಾಶುಲ್ಕದಿಂದ ವಿನಾಯಿತಿ ಪಡೆಯಬಹುದು**

- ಬಡತನ ರೇಖೆಗಿಂತ ಕೆಳಗಿರುವವರು ಹಾಗೂ ಅಂತ್ಯೋದಯ ಕಾರ್ಡನ್ನು ಹೊಂದಿದವರು
- ಆಸ್ಪತ್ರೆಯ ಸಂದರ್ಶಕ ಮಂಡಳಿಯು ಶಿಫಾರಸ್ಸು ಮಾಡಿರುವ ಬಡ ರೋಗಿಗಳು.

The following people can get concession from the User fee

- BPL and Anthyodaya card holders
- Poor people referred by the Board of Visitors.

**'ನೀಡಿದ ಹಣಕ್ಕೆ ಪೂರ್ಣ ಪ್ರಮಾಣದ ರಶೀದಿಯನ್ನು ಕೇಳಿ ಪಡೆಯಿರಿ'.**

**'ಲಂಚ ಕೊಡಬೇಡಿ, ಕೊಡುವವರನ್ನು ಪ್ರೋತ್ಸಾಹಿಸಬೇಡಿ'**

**'Demand and obtain receipts for full amount paid'**

**'Don't give bribe , don't encourage people who pay bribe'**



ಪಬ್ಲಿಕ್ ಅಫೇರ್ಸ್ ಸೆಂಟರ್, ... – 560210. www.pacindia.org

# ಅನುಬಂಧ-4. ಹೆರಿಗೆ ಆಸ್ಪತ್ರೆಗಳಿಗೆಂದು ತಯಾರಿಸಲಾದ ದೂರು ದಾಖಲಾತಿಯ ಮಾಹಿತಿ




**ಬಿ.ಬಿ.ಎಮ್.ಪಿ ಹೆರಿಗೆ ಆಸ್ಪತ್ರೆಯ ಸಾರ್ವಜನಿಕ ದೂರು ನಿರ್ವಹಣೆ ವ್ಯವಸ್ಥೆ**

| | |
|---|---|
| | ಆಸ್ಪತ್ರೆಯ ಸೇವೆಯ ಬಗ್ಗೆ ಸಾರ್ವಜನಿಕರು ಅಧಿಕಾರಿಗಳಿಗೆ ದೂರು/ಸಲಹೆಗಳನ್ನು ಸಲ್ಲಿಸಬಹುದು.<br>ಪ್ರತಿಯೊಂದು ಆಸ್ಪತ್ರೆಯಲ್ಲಿಯೂ ದೂರು/ಸಲಹೆಗಳನ್ನು ಸಲ್ಲಿಸುವ ಪೆಟ್ಟಿಗೆಯನ್ನು ಇಡಲಾಗಿದೆ. ಇದಕ್ಕೆ ದೂರು/ಸಲಹೆಗಳನ್ನು ಬರೆದು ಹಾಕಬಹುದು |
| | ಬಳಕೆದಾರರು ಈ ಕೆಳಕಂಡ ಅಧಿಕಾರಿಗಳಿಗೆ ತಮ್ಮ ಕುಂದು ಕೊರತೆಗಳನ್ನು ದೂರವಾಣಿಯ ಮೂಲಕ ತಿಳಿಸಬಹುದು.<br>1. ಹೆರಿಗೆ ಆಸ್ಪತ್ರೆಯ ವೈದ್ಯಾಧಿಕಾರಿ ..........................................<br>ದೂರವಾಣಿ ಸಂಖ್ಯೆ:..........................................<br>(24 ಗಂಟೆಯಲ್ಲಿ ಪ್ರತಿಕ್ರಿಯೆ ನೀಡದೆ ಇದ್ದಲ್ಲಿ)<br><br>2. ..........................................ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರು.<br>ದೂರವಾಣಿ ಸಂಖ್ಯೆ:..........................................<br>(48 ಗಂಟೆಯಲ್ಲಿ ಪ್ರತಿಕ್ರಿಯೆ ನೀಡದೆ ಇದ್ದಲ್ಲಿ)<br><br>3. ಆರೋಗ್ಯಾಧಿಕಾರಿ ತಾ.ಮು.ಕು.ಕ(ವಲಯ)..............................<br>ದೂರವಾಣಿ ಸಂಖ್ಯೆ:..........................................<br>(7 ದಿನಗಳಲ್ಲಿ ಪ್ರತಿಕ್ರಿಯೆ ನೀಡದೆ ಇದ್ದಲ್ಲಿ)<br><br>4. ಮುಖ್ಯ ಆರೋಗ್ಯಾಧಿಕಾರಿ..........................................<br>ದೂರವಾಣಿ ಸಂಖ್ಯೆ:..........................................<br><br>5. ಸಂದರ್ಶಕ ಮಂಡಳಿ ಸದಸ್ಯರು..................................<br>ದೂರವಾಣಿ ಸಂಖ್ಯೆ:.......................................... |



ಪಬ್ಲಿಕ್ ಅಫೇರ್ಸ್ ಸೆಂಟರ್, 15, ಕೆ.ಐ.ಎ.ಡಿ.ಬಿ ಕೈಗಾರಿಕಾ ಪ್ರದೇಶ, ಬೊಮ್ಮಸಂದ್ರ-ಜಿಗಣಿ ಲಿಂಕ್ ರಸ್ತೆ, ಬೆಂಗಳೂರು - 562106: www.pacindia.org

# ಶಬ್ಧ ಸಂಗ್ರಹ

**1. ಸಿಟಿಜನ್ ರಿಪೋರ್ಟ್ ಕಾರ್ಡ್ (ನಾಗರಿಕ ಪ್ರತಿಕ್ರಿಯೆಯ ಸೂಚಕ)**

ಸಿಟಿಜನ್ ರಿಪೋರ್ಟ್ ಕಾರ್ಡ್ ಎಂಬುದು ಒಂದು ಸಂಶೋಧನಾ ವಿಧಾನವಾಗಿದೆ. ಸೇವೆಯನ್ನು ಪಡೆದ ಬಳಕೆದಾರರನ್ನು ಸಂದರ್ಶಿಸಿ ಅವರ ಅನುಭವವನ್ನು ಪಡೆಯುವ ಮೂಲಕ ಸೇವೆಯ ಗುಣಮಟ್ಟವನ್ನು ತಿಳಿಸುವ ವಿಧಾನ.

**2. ಕಮ್ಯುನಿಟಿ ಸ್ಕೋರ್ ಕಾರ್ಡ್ (ಸಮುದಾಯದ ಅಂಕ ಪಟ್ಟಿ)**

ಆಸ್ಪತ್ರೆಯ ಬಳಕೆದಾರರು ತಾವು ಆಸ್ಪತ್ರೆಯಿಂದ ಪಡೆದ ಸೇವೆಗಳಿಗೆ ಅಂಕಗಳನ್ನು ನೀಡುವ ಮೂಲಕ ಸೇವೆಯ ಗುಣಮಟ್ಟವನ್ನು ಮೌಲ್ಯಮಾಪನ ಮಾಡುವುದು.

**3. ಸಿಬ್ಬಂದಿಗಳ ಸ್ಕೋರ್ ಕಾರ್ಡ್ (ಸಿಬ್ಬಂದಿಗಳ ಅಂಕ ಪಟ್ಟಿ)**

ಆಸ್ಪತ್ರೆಯ ಸಿಬ್ಬಂದಿಗಳು ತಾವು ಆಸ್ಪತ್ರೆಯ ಬಳಕೆದಾರರಿಗೆ ನೀಡುತ್ತಿರುವ ಸೇವೆಗಳಿಗೆ ಅಂಕಗಳನ್ನು ನೀಡುವ ಮೂಲಕ ಸ್ವಮೌಲ್ಯಮಾಪನ ಮಾಡುವುದು.

**4. ಆಯವ್ಯಯದ ವಿಶ್ಲೇಷಣೆ (ಬಜೆಟ್ ಅನಾಲಿಸಿಸ್)**

ಹೆರಿಗೆ ಆಸ್ಪತ್ರೆಯ ಖರ್ಚು ಮತ್ತು ವೆಚ್ಚಗಳ ವಿಶ್ಲೇಷಿಸಲು ನಡೆಸಿದ ಅಧ್ಯಯನವೇ ಆಯವ್ಯಯದ ವಿಶ್ಲೇಷಣೆ.

**5. ಮಡಿಲು ಯೋಜನೆ**

ಬಿಬಿಎಂಪಿ ಹೆರಿಗೆ ಆಸ್ಪತ್ರೆಯಲ್ಲಿ ಹೆರಿಗೆಯಾದ ಎರಡು ಜೀವಂತ ಮಗುವನ್ನು ಹೊಂದಿದ ತಾಯಿಗೆ **ಮಡಿಲು ಯೋಜನೆಯ** ಲಾಭವನ್ನು ನೀಡಲಾಗುತ್ತದೆ.

**ಈ ಯೋಜನೆಯ ಫಲಾನುಭವಿಗಳ ಅರ್ಹತೆಗಳು**

- ಸರ್ಕಾರಿ ಆಸ್ಪತ್ರೆಗಳಲ್ಲಿ ಹೆರಿಗೆಯಾದ ಎಲ್ಲಾ ಮಹಿಳೆಯರು.
- ಮೊದಲ ಎರಡು ಜೀವಂತ ಮಗುವನ್ನು ಹೊಂದಿರುವ ತಾಯಂದಿರು.

ಈ ಯೋಜನೆಯ ಅಡಿಯಲ್ಲಿ ಮಡಿಲು ಕಿಟ್ ಒಳಗೊಂಡ ವಸ್ತುಗಳು– ಸೊಳ್ಳೆ ಪರದೆ, ಜಮಖಾನ (ಮೀಡಿಯಂ ಸೈಜ್), ಬೆಡ್ ಶೀಟ್(ಮೀಡಿಯಂ), ತಾಯಿಗೆ ದಪ್ಪನೆ ಹೊದಿಕೆ(ಮೀಡಿಯಂ), ತಾಯಿಗೆ ಮೈಸೂರ್ ಸ್ಯಾಂಡಲ್ ಸೋಪು, ಬಟ್ಟೆ ಒಗೆಯುವ

ಸಾಬೂನು, ತಾಯಿಗೆ ಹೊಟ್ಟೆಗೆ ಕಟ್ಟುವ ಬಟ್ಟೆ, ಸ್ಯಾನಿಟರಿ ಪ್ಯಾಡ್ (ಚೌಕ ಕಾಟನ್ ಬಟ್ಟೆ ವಿತ್ ಕುಣಿಕೆ), ತಾಯಿಗೆ ಬಾಚಣಿಗೆಯೊಂದಿಗೆ ಕೊಬ್ಬರಿ ಎಣ್ಣೆ (200ಮೀ.ಲೀ. ಟೂತ್ ಪೇಸ್ಟ್ & ಬೇಷ್), ತಾಯಿಗೆ ಟವಲ್, ಮಗುವಿಗೆ ರಬ್ಬರ್ ಶೀಟ್ ಮೇಲೆ ಬೆಡ್ ಶೀಟ್, ಮಗುವಿಗೆ ಹೊದಿಕೆ, ಮಗುವಿಗೆ ರಬ್ಬರ್ ಶೀಟ್, ಮಗುವಿಗೆ ಡಯಪರ್, ಮಗುವಿಗೆ ಜುಬ್ಲ, ಮಗುವಿಗೆ ಸ್ವೆಟರ್+ಕುಲಾವಿ+ಕಾಲುಚೀಲ, ಒಂದು ಪಾರದರ್ಶಕ ಪ್ಲಾಸ್ಟಿಕ್ ಬ್ಯಾಗ್ (ಕಿಟ್), ಮಗುವಿಗೆ ಮೈ ಸಾಬೂನು, ಮಗುವಿಗೆ ಪೌಡರ್ 50 ಗ್ರಾಂ.

### 6. ಜನನಿ ಸುರಕ್ಷಾ ಯೋಜನೆ

ಎಸ್ ಸಿ ಮತ್ತು ಎಸ್.ಟಿ ಮತ್ತು ಕಡಿಮೆ ಆದಾಯವನ್ನು ಹೊಂದಿರು ಬಿಪಿಎಲ್ ಕುಟುಂಬಕ್ಕೆ (ವಾರ್ಷಿಕ ಆದಾಯ 17000ಕ್ಕಿಂತ ಕಡಿಮೆ) ಸೇರಿದ ಮಹಿಳೆಗೆ **ಜನನಿ ಸುರಕ್ಷಾ ಯೋಜನೆಯ** ಲಾಭದ 600/- ರೂ.ಗಳ ಚೆಕ್ ನೀಡಲಾಗುವುದು.

**ಈ ಯೋಜನೆಯ ಲಾಭ ಪಡೆಯಲು ಬೇಕಾದ ಅರ್ಹತೆಗಳು:**

1. ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯಾಗಿರಬೇಕು.
2. ಪ್ರಸ್ತುತ ಹೆರಿಗೆ ಮೊದಲನೆಯ ಅಥವಾ ಎರಡನೇ ಜೀವಂತ ಹೆರಿಗೆಯಾಗಿರಬೇಕು.
3. ಮಹಿಳೆಯು 19 ವರ್ಷ ಮೇಲ್ಪಟ್ಟಿರಬೇಕು ಹಾಗೂ ಕನಿಷ್ಠ 3 ಬಾರಿ ವೈದ್ಯರಿಂದ ಗರ್ಭಿಣಿ ತಪಾಸಣೆ ಮಾಡಿಸಿಕೊಂಡು ಕಬ್ಬಿಣಾಂಶದ ಮಾತ್ರೆ ಮತ್ತು ಟಿ.ಟಿ ಚುಚ್ಚುಮದ್ದು ಪಡೆದಿರಬೇಕು.

# PAC Publications

1. *Strengthening Public Accountability: New Approaches and Mechanisms* (Samuel Paul), 1995.
2. *Public Services and the Urban Poor in Mumbai: A Report Card* (Suresh Balakrishnan, Sita Sekhar), 1995.
3. *A Report Card on Public Services in Indian Cities: A View from Below* (Samuel Paul), 1995.
4. *Corruption: Who will Bell the Cat?* (Samuel Paul), 1997.
5. *Bangalore Hospitals and the Urban Poor: A Report Card* (Suresh Balakrishnan, Anjana Iyer), 1998.
6. *Prometheus Unbound Or, Still in Chains? A Report Card on the Impact of Economic Reforms on the Private Enterprise Sector in India* (Gopakumar K. Thampi), 1998.
7. *Elections in Bangalore Municipal Corporation: An Experiment to Stimulate Informed Choices* (S. Manjunath), 1998.
8. *Voices from the Capital: A Report Card on Public Service in Delhi* (Sita Sekhar, Suresh Balakrishnan), 1999.
9. *A Citizens' Report Card on Karnataka's Governance* (Samuel Paul, Gopakumar K), 1999.
10. *City Finances in India: Some Disquieting Trends* (Sita Sekhar, Smita Bidarkar), 1999.
11. *Strengthening Public Accountability and Good Governance* (K. Gopakumar), 1999.
12. *Public Interest Litigation: A Tool for Social Action and Public Accountability* (Anuradha Rao), 1999.
13. *State of the Art as Art of the State: Evaluating e-governance Initiatives through citizen feedback* (Ramesh Ramanathan, Suresh Balakrishnan), 2000.
14. *Wanted: An Enabling Industrial Environment in Karnataka* (Samuel Paul, Sheila Premkumar, Prasann Thatte), 2000.
15. *Benchmarking Urban Services: The Second Report Card on Bangalore* (Samuel Pual, Sita Sekhar), 2000.
16. *Citizen's Audit of Public Services in Rural Tamil Nadu* (Catalyst Trust, Public Affairs Centre), 2001.
17. *Civic Engagement for Better Public Governance* (Manjunath Sadashiva, Suresh Balakrishnan), 2002.
18. *New Media and People's Empowerment: The Second Public Affairs Lecture* (Dr. Mallika Sarabhai), 2002.
19. *ABC... Of Voting: A Guide For Voting in Indian Elections* (Public Affairs Centre), 2002.

20. *Universal Elementary Education: A Way Forward for India. The Third Annual Public Affairs Lecture* (Azim Premji), 2003.
21. *A Report Card on Bhoomi Kiosks* (Albert Lobo, Suresh Balakrishnan), 2004.
22. *Towards User Report Cards on Irrigation Services* (Suresh Balakrishnan, Albert Lobo), 2004.
23. *BATF: A Partnership with Promise? The Fourth Annual Public Affairs Lecture* (Nandan M. Nilekani), 2004.
24. *Public Affairs Centre: A Retrospective 1994 - 2000.*
25. *Holding a Mirror to the New Lok Sabha* (Samuel Paul, M. Vivekananda), 2005.
26. *Karnataka's Citizens' Charters: A Preliminary Assessment* (Anuradha Rao), 2005.
27. *Electoral Disclosure in Karnataka: A Reality Check* (Samuel Paul, Poornima D.G., Anuradha Rao), 2005.
28. *Spirituality & Universality: The Fifth Annual Public Affairs Lecture* ( Sri Sri Ravi Shankar), 2005.
29. *Benchmarking India's Public Services: A comparison across the states* (Samuel Paul, Suresh Balakrishnan, K. Gopakumar, Sita Sekhar, M. Vivekananda), 2005.
30. *Setting a Benchmark: Citizen Report Card on Public Services in Bhubaneswar* (Public Affairs Centre, Centre for Youth and Social Development), 2005.
31. *Are They Being Served? Citizen Report Card on Public Services for the Poor in Peri-Urban Areas of Bangalore* (Sita Sekhar, Meena Nair, Venugopala Reddy), 2005.
32. *Holding the State to Account: Lessons of Bangalore's Citizen Report Cards* (Samuel Paul), 2006.
33. *Deepening Democracy: A Decade of Electoral Interventions by Civil Society Groups 1996-2006* (Public Affairs Centre), 2006.
34. *Benchmarking Bangalore's Public Services: What the Third Citizen Report Card Reveals* (Sita Sekhar, Manisha Shah), 2006.
35. *Citizenship and Good Governance: The Sixth Annual Public Affairs Lecture* (Sheila Dikshit), 2006.
36. *Public Services in Hubli-Dharwad: A Citizen Report Card* (Sita Sekhar, Meena Nair, Venugopala Reddy), 2007.
37. *Greater Bangalore Governance Options* (S. Krishna Kumar), 2007.
38. *Assessment of Citizen Centres in Tamil Nadu* (Sita Sekhar, Meena Nair, A. Venugopala Reddy, K. Prabhakar), 2007.
39. *Public Services in Hubli-Dharwad: The Second Citizen Report Card* (Sita Sekhar, Meena Nair, K. Prabhakar, Prarthana Rao), 2008.

40. *Decentralised Service Delivery in Panchayats: A Pilot Citizens' Audit* (Sita Sekhar, Meena Nair, A. Venugopala Reddy), 2008.
41. *Public Services Provided by Gram Panchayats in Chattisgarh: A Citizen Report Card* (Sita Sekhar, Meena Nair, K. Prabhakar), 2008.
42. *Study of Sarva Shiksha Abhiyan Initiatives on Universalisation of Elementary Education in Karnataka with Special Reference to Concerns of Gender and Equity* (Sita Sekhar, Meena Nair, K. Prabhakar, Prarthana Rao), 2009.
43. *Services of Gram Panchayats in Koraput, Orissa: A Citizen Report Card* (Sita Sekhar, Meena Nair, K. Prabhakar, Prarthana Rao), 2009.
44. *A Mirror to the Police: A Bottom-Up Assessment of the Karnataka Police* (Meena Nair, K. Prabhakar, Prarthana Rao), 2010.
45. *Towards a Vibrant Knowledge Society: A Stakeholder Audit of the Karnataka Jnana Aayoga* (Shweta Gaur, Nivedita Kashyap, Meena Nair, R. Suresh), 2011.
46. *A Life and Its Lessons: Memoirs* (Samuel Paul), 2012.
47. *Citizen Monitoring and Audit of PMGSY Roads: Pilot Phase II* (Public Affairs Centre), 2012.
48. *Improving Governance the Participatory Way: A pilot study of maternal health services for urban poor in Bangalore* (Meena Nair, K Prabhakar, Prarthana Rao, Poornima G. R.), 2012.
49. *Case Studies from the Social Audit of Public Service Delivery in Karnataka* (M. Vivekananda, S. Sreedharan, Malavika Belavangala), 2012.
50. *Changing the Urban Face of Karnataka: Evidence from three urban development programmes* (Kala S Sridhar, Venugopala Reddy, Pavan Srinath), 2012

## PAC Books by other Publishers

1. *Corruption in India: Agenda for Action* (S. Guhan, Samuel Paul), Vision Books: 1997.
2. *Holding the State to Account: Citizen Monitoring in Action* (Samuel Paul), Books for Change: 2002.
3. *Who Benefits from India's Public Services?* (Samuel Paul, Suresh Balakrishnan, K. Gopakumar, Sita Sekhar, M. Vivekananda), Academic Foundation: 2006.
4. *State of Urban Services in India's Cities* (Kala Seetharam Sridhar, A. Venugopala Reddy), Oxford University Press India: 2010.
5. *State of Our Cities: Evidence from Karnataka* (Samuel Paul, Kala Seetharam Sridhar, A. Venugopala Reddy, Pavan Srinath), Oxford University Press India: 2012.

